


# ಕಾವ್ಯಮಂದಾರ

ರಜತೋತ್ಸವ



ಬಿ. ಎಂ. ಶ್ರೀ ಭವನದ ಆರಂಭೋತ್ಸವ
ವಿಶೇಷ ಸಂಚಿಕೆ
೧೯೮೪



# ಕನ್ನಡ ಮಿತ್ರರು

ಅರ್ತ್ ಮೂವರ್ಸ್, ಬೆಮೆಲ್ ನಗರ
ಕೋಲಾರ ಚಿನ್ನದಗಣಿ ಪ್ರದೇಶ

# ವಸುಂಧರಾ
# ಕಾವ್ಯಮಂದಾರ

## ಕಟ್ಟಡ ಉದ್ಘಾಟನಾ ಸಮಾರಂಭದ ವಿಶೇಷ ಸಂಚಿಕೆ




ಕನ್ನಡ ಮಿತ್ರರು
ಬೆಮೆಲ್‌ನಗರ
ಕೋಲಾರ ಚಿನ್ನದಗಣಿ ಪ್ರದೇಶ

ಪ್ರಕಾಶಕರು :

**ಕನ್ನಡ ಮಿತ್ರರು**
ಬಿಮೆಲ್‌ನಗರ
ಕೋಲಾರ ಚಿನ್ನದ ಗಣಿ ಪ್ರದೇಶ

೧೯೮೪

ಹಕ್ಕುಗಳು :
**ಆಯಾ ಲೇಖಕರದು**

ರಕ್ಷಾಪುಟ :
**ಕನ್ನಡ ಮಿತ್ರರು ಸಭಾಭವನ**

ವಿನ್ಯಾಸ :
**ರಾಮಸ್ವಾಮಿ ಮತ್ತು ಸಿದ್ದಯ್ಯ**

ಸಂಪಾದಕರು :
**ಅರವಿಂದ ಶೆಟ್ಟಿ**
**ತಾವರೆಕೆರೆ ಸುಬ್ರಮಣ್ಯಂ**

ಮುದ್ರಣ : **ಶ್ರೀ ವೆಂಕಟೇಶ್ವರ ಕಲಾ ಮುದ್ರಕರು, ಕೋಲಾರ**



ಕನ್ನಡದ ಭಾಗ್ಯಶ್ರೀ

## ಆಚಾರ್ಯ ಬಿ. ಎಂ. ಶ್ರೀ

ಅವರಿಗೆ

ಗೌರವಾಭಿವಂದನ

ಕನ್ನಡ ಆಳಲಿ - ಕನ್ನಡ ಬಾಳಲಿ

ಕನ್ನಡ ವಿರಾಜಿಸಲಿ

ಎನುತ ಬಾಳಿನುದ್ದಕೂ ನುಡಿದು

ನಡೆದು – ನಡೆಸಿದ – ಧೀಮಂತ

ಕನ್ನಡ ಚೇತನ

ನಿಮಗಿದೋ

'ಕಾವ್ಯಮಂದಾರ' ನುಡಿಮಾಲೆಯ

ಸಮರ್ಪಣೆ

# ಓದುಗರೊಂದಿಗೆ

**ಕನ್ನಡ ಮಿತ್ರರು** ತನ್ನ ಹದಿನೈದು ವರ್ಷಗಳ ಸೇವೆಯನ್ನು ಯಶಸ್ವಿಯಾಗಿ ಮಾಡಿಕೊಂಡು ಮುನ್ನಡೆಯುತ್ತಿರುವ ದ್ಯೋತಕವಾಗಿ ತನ್ನದೇ ಆದ ಸ್ವಂತ ಕಟ್ಟಡದ ಸಮಾರಂಭವು ಇಂದು ನೆರವೇರುತ್ತಲಿದೆ. ಈ ಸಮಾರಂಭವನ್ನು ಚಿರಸ್ಮರಣೀಯವನ್ನಾಗಿ ಮಾಡಲು ಈ ವಿಶೇಷಸಂಚಿಕೆ **ವಸುಂಧರಾ–ಕಾವ್ಯಮಂದಾರ** ವನ್ನು ಹೊರತರುತ್ತಿದೆ ಎಂದು ತಿಳಿಸಲು ಸಂತೋಷಿಸುತ್ತೇವೆ.

ಸೀಮಿತಸಂಪನ್ಮೂಲಗಳಿಂದಾಗಿ ಕವನಗಳಿಗೇ ಮೀಸಲಾಗಿರುವ ಈ ಕಿರು ಹೊತ್ತಿಗೆಯಲ್ಲಿ ಸಂಘದ ಸದಸ್ಯರಲ್ಲಿ ಅಡಗಿರುವ ಪ್ರತಿಭೆಗೆ ಪ್ರೋತ್ಸಾಹನೀಡುವ ಪ್ರಯತ್ನವನ್ನು ಮಾಡಲಾಗಿದೆ.

ನಮ್ಮ ಪ್ರಾರ್ಥನೆಯನ್ನು ಮನ್ನಿಸಿ ಕವನಗಳನ್ನು ಬರೆದು ಕೊಟ್ಟ ಮಿತ್ರರಿಗೂ, ಜಾಹಿರಾತುದಾರರಿಗೂ, ಈ ಸಂಕಲನವನ್ನು ಪ್ರಕಟಿಸಲು ಸಲಹೆ ಕೊಟ್ಟು ಸುಂದರವಾದ ಹೆಸರನ್ನು ಸೂಚಿಸಿದ ಶ್ರೀ ಜ್ಞಾನಾನಂದರವರಿಗೂ, ಸಕಾಲದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿ ಕೊಟ್ಟ ಕೋಲಾರದ ಶ್ರೀ ವೆಂಕಟೇಶ್ವರ ಕಲಾ ಮುದ್ರಕರಿಗೂ ಮತ್ತು ಈ ಸಂಚಿಕೆಯನ್ನು ಹೊರತರಲು ನೆರವಾದ ಎಲ್ಲರಿಗೂ ವಂದನೆಗಳನ್ನು ಅರ್ಪಿಸುತ್ತಿದ್ದೇವೆ.

ಈ ಸಂಚಿಕೆಯನ್ನು ಸಂಪಾದಿಸುವ ಗುರುತರ ಜವಾಬ್ದಾರಿಯನ್ನು ನಮಗೆ ವಹಿಸಿಕೊಟ್ಟ ಕನ್ನಡ ಮಿತ್ರರು ಕಾರ್ಯಕಾರಿ ಸಮಿತಿಯವರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇವೆ.

**ಸಂಪಾದಕರು**

# ಕನ್ನಡ ಮಿತ್ರರು

## ಕಾರ್ಯಕಾರಿ ಸಮಿತಿ

ಅಧ್ಯಕ್ಷರು :
**ವಿ. ಎಸ್. ವೆಂಕಟನಾಥನ್**
ಉಪಾಧ್ಯಕ್ಷರು :
**ಕೆ. ವಿ. ಶ್ರೀನಿವಾಸಮೂರ್ತಿ**
ಕಾರ್ಯದರ್ಶಿ :
**ಸಿ. ಕೆ. ಚಂದ್ರಶೇಖರ್**
ಖಜಾಂಚಿ :
**ಲಕ್ಷ್ಮೀನಾರಾಯಣ್**
ಲೆಕ್ಕ ಪರಿಶೋಧಕರು :
**ಎಂ. ಎಸ್. ಜಯರಾಂ**
ಸದಸ್ಯರು :
**ಕೈವಾರ್ ಗೋಪಿನಾಥ್**
**ಎಸ್. ಪಿ ಪಟೇಲ್**
**ಪುಟ್ಟಣ್ಣಯ್ಯ**
**ಜೆ. ಎಸ್. ಚನ್ನಬಸಪ್ಪ**
**ಡಿ. ಭಾನುಮೂರ್ತಿ**
**ಕೆ. ಶ್ರೀನಿವಾಸಮೂರ್ತಿ**
**ಜಿ. ಎಸ್. ರಾಮಕೃಷ್ಣ**
**ಉಮಾಪತಿ**
**ಯರಗುಪ್ಪಿ**
**ಲಕ್ಷ್ಮಯ್ಯ**
**ಹನುಮೇಗೌಡ**
**ವಿ. ನಾರಾಯಣ್**
**ಕೆ. ರಾಮಕೃಷ್ಣ**

## ಕಟ್ಟಡ ನಿರ್ಮಾಣ ಸಮಿತಿ

ಅಧ್ಯಕ್ಷರು :
**ಎಸ್. ಆರ್. ಪ್ರಭಾಕರ್**
ಕಾರ್ಯದರ್ಶಿ :
**ಸಿ. ಕೆ. ಚಂದ್ರಶೇಖರ್**
ಖಜಾಂಚಿ :
**ಕೆ. ವಿ. ಶ್ರೀನಿವಾಸಮೂರ್ತಿ**
ಸಹ ಕಾರ್ಯದರ್ಶಿ :
**ಮ. ಪುಟ್ಟಸ್ವಾಮಿ**
ಸದಸ್ಯರು :
**ಎಸ್. ಆರ್. ರಂಗನಾಥರಾವ್**
**ನಟೇಶಮೂರ್ತಿ**
**ಚ. ನಾ. ಅನಂತರಾಂ**
**ಹೆಚ್. ವಿ. ರಮೇಶ್**
**ಎಸ್. ಪಿ. ಪಟೇಲ್**
**ನಾಗರಾಜ ಪ್ರೋತ್ನಿಸ್**
**ರಂಗಸ್ವಾಮಿಶೆಟ್ಟಿ**
**ಸಿದ್ದಲಿಂಗಪ್ಪ**
**ಅ. ನ. ಲಕ್ಷ್ಮಣಮೂರ್ತಿ**

ಸಂಪಾದಕರು:
**ಅರವಿಂದ ಕಟ್ಟಿ**
**ತಾವರೆಕೆರೆ ಸುಬ್ರಮಣ್ಯಂ**

# ಹಸಿರು ತೋರಣ

ಗಡಿನಾಡಾದ ಈ ಚಿನ್ನದಗಣಿ ಪ್ರದೇಶದ ಬೆಮೆಲ್ ನಗರದ ವ್ಯಾಪ್ತಿಯಲ್ಲಿ ಕನ್ನಡ ನಾಡು-ನುಡಿಗೆ ಸೇವೆಸಲ್ಲಿಸುವ ಮಹದಾಕಾಂಕ್ಷೆಯಿಂದ ಕನ್ನಡ ಮಿತ್ರರು ಸಂಸ್ಥೆ ಉದಯವಾಯಿತು. ತನ್ನ ಧ್ಯೇಯ ಸಾಧನೆಗಾಗಿ ಕೆಲವು ಕಾರ್ಯಕ್ರಮ ಗಳನ್ನು ರೂಪಿಸಿಕೊಂಡು ಹಂತ ಹಂತವಾಗಿ ಯಶಸ್ವಿಯಾಗುತ್ತಾ ಬಂದಿತು. ತನ್ನೆಲ್ಲ ಕಾರ್ಯ ಚಟುವಟಿಕೆಗಳಿಗೆ ಮತ್ತು ಒಂದು ಉತ್ತಮ ಗ್ರಂಥ ಭಂಡಾರಕ್ಕಾಗಿ ಸ್ವಂತ ಕಟ್ಟಡವನ್ನು ಹೊಂದುವ ಮಹದಾಸೆಯಿಂದ ೧೯೭೫ ರಲ್ಲಿ ಕಟ್ಟಡಕ್ಕಾಗಿ ನಿವೇಶನವನ್ನು ಕೊಂಡುಕೊಳ್ಳಲಾಯಿತು. ೧೭-೧೦-೧೯೭೭ ರಂದು ಖ್ಯಾತ ಗಾಯಕ ಗಾಯಕಿಯರಾದ ಪಿ. ಬಿ. ಶ್ರೀನಿವಾಸ್ ಮತ್ತು ಬಿ. ಕೆ. ಸುಮಿತ್ರರಿಂದ ಸಂಗೀತಸಂಜೆ ಸಹಾಯಾರ್ಥ ಕಾರ್ಯಕ್ರಮವನ್ನು ಏರ್ಪಡಿಸಿ ಕಟ್ಟಡ ನಿರ್ಮಾಣ ಕ್ಕಾಗಿ ಹಣವನ್ನು ಸಂಗ್ರಹಿಸಲಾಯಿತು. ನಿವೇಶನದ ಬಗ್ಗೆ ಇದ್ದ ಕೆಲವು ತೊಡಕು ಗಳು ನಿವಾರಣೆಯಾಗಿ ೫-೮-೧೯೮೧ ರಂದು ಕಾನೂನುಬದ್ಧವಾದ ಮಾನ್ಯತೆ ಮತ್ತು ಕಟ್ಟಡ ನಿರ್ಮಾಣಕ್ಕೆ ಅಂಗೀಕಾರ ದೊರೆಯಿತು. ೧೩-೧೨-೧೯೮೧ ರಂದು ಬಿ.ಇ.ಎಂ.ಎಲ್. ಕಾರ್ಖಾನೆಯ ತಾಂತ್ರಿಕ ನಿರ್ದೇಶಕರು ಮತ್ತು ಕನ್ನಡ ಮಿತ್ರರ ಹಿತೈಷಿಗಳೂ ಆದ ಶ್ರೀ ಬೀ. ರಾ. ಶ್ರೀನಿವಾಸಮೂರ್ತಿಯವರ ಅಮೃತ ಹಸ್ತದಿಂದ ಶಂಕುಸ್ಥಾಪನೆಯಾಯಿತು. ಕಟ್ಟಡದ ನಿರ್ಮಾಣದ ಹಂತದಲ್ಲಿ ಹಣದ ಕೊರತೆ ಕಂಡುಬಂದಾಗ ಅಂತರರಾಷ್ಟ್ರೀಯ ಖ್ಯಾತಿಯ ಪ್ರಭಾತ್ ಕಲಾವಿದರಿಂದ 'ಸಿಂಡ್ರೆಲಾ' ನೃತ್ಯ ರೂಪಕ ಸಹಾಯಾರ್ಥ ಪ್ರದರ್ಶನವನ್ನು ಏರ್ಪಡಿಸಿ ಹಣವನ್ನು ಹೊಂದಿಸಲಾಯಿತು.

ಕನ್ನಡ ಮಿತ್ರರ ಬಹುದಿನದ ಕನಸು ಈ ದಿವಸ ನನಸಾಗಿ ಸ್ವಂತ ಕಟ್ಟಡವು ತಮ್ಮೆಲ್ಲರ ಅಭಿಮಾನದ ಪ್ರತೀಕವಾಗಿ ನಿಂತಿದೆ. ಈ ಮಹತ್ಕಾರ್ಯವನ್ನು ಸಾಧಿಸಲು ತಮ್ಮೆಲ್ಲರ ಔದಾರ್ಯ, ಪ್ರೋತ್ಸಾಹ ಮತ್ತು ಬೆಂಬಲವೇ ಮುಖ್ಯಕಾರಣ ಈ ಸಾಧನೆಯಲ್ಲಿ ಕಟ್ಟಡ ನಿಮಾಣ ಸಮಿತಿ ಮತ್ತು ವಸುಂಧರಾ ವಿಶೇಷ ಸಮಿತಿಗಳ ಪಾತ್ರವೂ ಮಹತ್ತರವಾದುದು. ಕಟ್ಟಡ ನಿರ್ಮಾಣದ ಹೊಣೆಯನ್ನು ಹೊತ್ತು ವಿಶೇಷ ಆಸ್ಥೆವಹಿಸಿ ಸಮರ್ಪಕವಾಗಿ ನಿರ್ವಹಿಸಿದ ಶ್ರೀ ಎಸ್. ನಟೇಶ್‌ಮೂರ್ತಿ ರವರಿಗೂ, ಕಟ್ಟಡದ ಅಂದವನ್ನು ಹೆಚ್ಚಿಸಲು ನುಣುಪಾದ ಹಾಸುಗಲ್ಲುಗಳನ್ನೂ ಮತ್ತು ಮುಖ್ಯ ದ್ವಾರವನ್ನು ಕೊಡುಗೆಯಿತ್ತ ಎನ್. ರಾಮರೆಡ್ಡಿ ಸಂಸ್ಥೆಯ ಶ್ರೀ ವೆಂಕಟೇಶ್‌ರವರಿಗೂ, ಬಿ.ಇ.ಎಂ.ಎಲ್. ಆಡಳಿತ ವರ್ಗದವರಿಗೂ ಮತ್ತು ಸಕಾಲದಲ್ಲಿ ಸಹಕರಿಸಿದ ಎಲ್ಲಮಹನೀಯರಿಗೂ ನಮ್ಮ ಹೃತ್ಪೂರ್ವಕ ವಂದನೆಗಳು.

ಎಸ್. ಆರ್. ಪ್ರಭಾಕರ್
ಅಧ್ಯಕ್ಷರು, ಕಟ್ಟಡ ನಿರ್ಮಾಣ ಸಮಿತಿ

**ಬಿ. ಆರ್. ಎಸ್. ಮೂರ್ತಿ**
ಡೈರೆಕ್ಟರ್ (ಟೆಕ್ನಿಕಲ್)

ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್
**ಬೆಂಗಳೂರು**

ದಿನಾಂಕ ೨೧-೧೦-೧೯೮೩

# ಸಂದೇಶ

ಕನ್ನಡ ಮಿತ್ರರು ಕಳೆದ ಹದಿನೈದು ವರ್ಷಗಳಿಂದ ಕನ್ನಡ ಗಡಿ ಪ್ರಾಂತ್ಯವಾದ ಕೆ. ಜಿ. ಎಫ್. ನಗರದಲ್ಲಿ ಎಲ್ಲ ಕಷ್ಟಗಳನ್ನು ಏಕಮನಸ್ಸಿನಿಂದ ಎದುರಿಸಿ ಗೆದ್ದು, ಕನ್ನಡ ಕಲಾ ಸಾಂಸ್ಕೃತಿಕ ಚಟುವಟಿಕೆಗಳನ್ನು ಎಲ್ಲರ ಮನ ಒಲಿಯುವಂತೆ ನಡೆಸುತ್ತಾ, ಸಾರ್ಥಕ-ಸಫಲ ಮಾರ್ಗದಲ್ಲಿ ಮುಂದುವರೆಯುತ್ತಾ ಬಂದು ಇಂದು ತಮ್ಮದೇ ಆದ ಒಂದು ಕಟ್ಟಡವನ್ನು ಸ್ಥಾಪಿಸಿ ಪ್ರಾರಂಭೋತ್ಸವ ನಡೆಸುತ್ತಿರುವುದನ್ನು ಅರಿತು ಅಪಾರ ಸಂತೋಷವಾಯಿತು.

ಈ ಸುಸಂದರ್ಭದಲ್ಲಿ ಹೊರಡಲಿರುವ **'ವಸುಂಧರಾ-ಕಾವ್ಯಮಂದಾರ'**ವು ಸಂಸ್ಥೆಯ ಘನತೆಗೆ ತಕ್ಕಂತೆ ಅರ್ಥಪೂರ್ಣವಾಗಿ ಸುಂದರವಾಗಿ ಮೂಡಿಬರಲಿ ಎಂದು ಮತ್ತು ಈ ಸಂಸ್ಥೆಯ ಎಲ್ಲ ಚಟುವಟಿಕೆಗಳೂ ಸಫಲವಾಗಿ ಸಂಸ್ಥೆಗೆ ಯಶಸ್ಸು ಹೆಚ್ಚು ಹೆಚ್ಚು ರೀತಿಯಲ್ಲಿ ದೊರೆತು ಜನಾದರಣೆಗೆ ಪಾತ್ರವಾಗಿ ಮುನ್ನಡೆಯಲಿ ಎಂದು ಆಶಿಸುತ್ತೇನೆ.

ಇಂತು, ಶುಭ ಕೋರುತ್ತಾ

ನಿಮ್ಮ ವಿಶ್ವಾಸಿ.
(ಸಹಿ) **ಬೀ. ರಾ. ಶ್ರೀನಿವಾಸಮೂರ್ತಿ**

**ಟಿ. ಆರ್. ಆರ್. ರಾವ್**
ಎಕ್ಸಿಕ್ಯುಟೀವ್ ಡೈರೆಕ್ಟರ್

ಭಾರತ್ ಅರ್ತ್ ಮೂವರ್ಸ್ ಲಿಮಿಟೆಡ್
ಅರ್ತ್ ಮೂವರ್ಸ್ ವಿಭಾಗ
**ಕೋಲಾರ ಚಿನ್ನದಗಣಿ ಪ್ರದೇಶ**
ದಿನಾಂಕ ೩೦-೧೨-೧೯೮೩

# ಸಂದೇಶ

**ಕನ್ನಡ ಮಿತ್ರರು** ಅರ್ತ್ ಮೂವರ್ಸ್ ಸಂಸ್ಥೆಯು ನಮ್ಮ ನಾಡ-ನುಡಿಯ – ಸಂಸ್ಕೃತಿಯ – ಲಲಿತಕಲೆಗಳ ಕಾರ್ಯರಂಗದಲ್ಲಿ ಪ್ರತಿಷ್ಠಿತ ಸಂಸ್ಥೆ. ಸುಮಾರು ಒಂದೂವರೆ ದಶಕಗಳಿಂದ ತುಂಬು ಉತ್ಸಾಹ ಸಂಭ್ರಮದಿಂದ ನಡೆಯುತ್ತಾ ಬಂದಿರುವುದು ಅಭಿಮಾನದ ಸಂಗತಿ.

ಸಂಸ್ಥೆಯ ಸ್ವಂತ ಕಟ್ಟಡ ಸುಸಜ್ಜಿತವಾಗಿ ನಿರ್ಮಾಣಗೊಂಡು, ಉದ್ಘಾಟನಾ ಸಮಾರಂಭದ ಸವಿನೆನಪಿಗಾಗಿ ವಿಶೇಷ ಸಂಚಿಕೆ **'ವಸುಂಧರಾ–ಕಾವ್ಯಮಂದಾರ'** ಹೊರತರುತ್ತಿರುವುದು ಸಂತಸ.

ನಿಮ್ಮ ಎಲ್ಲ ಯೋಜನೆಗಳು ಯಶಸ್ವಿಯಾಗಲಿ ಸದಾ ಉತ್ಸಾಹದಿಂದ ಮುನ್ನಡೆಯುತ್ತಿರಲಿ ಎಂದಾಶಿಸುವೆ.

ಅನಂತ ಶುಭಾಶಯಗಳು, ವಂದನೆಗಳು

ತಮ್ಮ ವಿಶ್ವಾಸಿ,
(ಸಹಿ) ಟಿ. ಆರ್. ಆರ್. ರಾವ್

**ಹಂಪ ನಾಗರಾಜಯ್ಯ**
ಅಧ್ಯಕ್ಷರು
ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿ ರಸ್ತೆ
ಚಾಮರಾಜಪೇಟೆ
**ಬೆಂಗಳೂರು – ೫೬೦ ೦೧೮**
ದಿನಾಂಕ ೨೪–೧೦–೮೩

# ಸಂದೇಶ

ಕೋಲಾರ ಚಿನ್ನದಗಣಿ ಪ್ರದೇಶದ ಬಿ.ಇ.ಎಂ.ಎಲ್.ನ ಕನ್ನಡ ಮಿತ್ರರು ಸಂಸ್ಥೆಯು ಕಳೆದ ೧೧ ವರ್ಷಗಳಿಂದಲೂ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಉಪಯುಕ್ತವಾದ ಸೇವೆಯನ್ನು ಸಲ್ಲಿಸುತ್ತಾ ಬಂದಿರುವುದನ್ನು ಗುರುತಿಸಿದ್ದೇನೆ. ಇದೀಗ ಸಂಸ್ಥೆಯು ತನ್ನದೇ ಆದ ಒಂದು ಸ್ವಂತ ಕಟ್ಟಡವನ್ನು ಪಡೆದಿದ್ದು ಅಲ್ಲಿ ಕಾರ್ಯಾಲಯ ಮತ್ತು ವಾಚನಾಲಯಗಳನ್ನು ತೆರೆಯಲಿರುವುದು ಬಹಳ ಸಂತೋಷದ ವಿಷಯವಾಗಿದೆ. ತಮ್ಮ ಸಂಸ್ಥೆಯ ವತಿಯಿಂದ ಇನ್ನೂ ಉತ್ತಮವಾದ ಉಪಯುಕ್ತವಾದ ಭೋದಪ್ರದವಾದ ಕಾರ್ಯಕ್ರಮಗಳು ನಡೆಯಲೆಂದು ಹೃತ್ಪೂರ್ವಕವಾಗಿ ಹಾರೈಸುತ್ತೇನೆ.

ತಮ್ಮ ವಿಶ್ವಾಸಿ,
(ಸಹಿ) **ಹಂಪನಾ**

---

**ಡಾ|| ಹಾ. ಮಾ. ನಾಯಕ**
ಅಧ್ಯಕ್ಷರು : ಕರ್ನಾಟಕ ಸಾಹಿತ್ಯ ಅಕಾಡೆಮಿ
ನಿರ್ದೇಶಕರು : ಕನ್ನಡ ಅಧ್ಯಯನ ಕೇಂದ್ರ
ಮೈಸೂರು ವಿಶ್ವವಿದ್ಯಾಲಯ

"ಗೋಧೂಳಿ"
ಜಯಲಕ್ಷ್ಮೀಪುರ
**ಮೈಸೂರು–೫೭೦ ೦೧೨**
ದಿನಾಂಕ ೧೪–೧೦–೧೯೮೩

# ಸಂದೇಶ

ನಿಮ್ಮ ನೂತನ ಕಟ್ಟಡದ ಪ್ರಾರಂಭೋತ್ಸವದ ನೆನಪಿನಲ್ಲಿ ನೀವು ಸ್ಮರಣ ಸಂಚಿಕೆಯೊಂದನ್ನು ಪ್ರಕಟಿಸುವ ವಿಷಯ ತಿಳಿದು ಸಂತೋಷವಾಯಿತು. ನಿಮ್ಮ ಕೆಲಸಕ್ಕೆ ಜಯವಿರಲಿ.

ಕನ್ನಡದ ಸ್ಥಾನಮಾನಗಳ ವಿಚಾರ ಈಗ ಅತ್ಯಂತ ಸೂಕ್ಷ್ಮ ಘಟ್ಟದಲ್ಲಿದೆ. ನಿಮ್ಮ ಪ್ರಕಟಣೆ ನಮ್ಮ ಜನರನ್ನು ಈ ದಿಶೆಯಲ್ಲಿ ಎಚ್ಚರಿಸುವ ಸಾಧನವಾಗಲಿ ಎಂದು ಹಾರೈಸುತ್ತೇನೆ.

ವಂದನೆಗಳೊಡನೆ.

ನಿಮ್ಮ ವಿಶ್ವಾಸದ,
(ಸಹಿ) **ಹಾ. ಮಾ. ನಾಯಕ**

# ಕನ್ನಡ ಮಿತ್ರರು ನಡೆದು ಬಂದ ದಾರಿ

★ ಸಿ. ಕೆ. ಚಂದ್ರಶೇಖರ್

ಕೋಲಾರ ಚಿನ್ನದಗಣಿ ಪ್ರದೇಶ ಕರ್ನಾಟಕದ ಗಡಿಯಲ್ಲಿರುವ ಸ್ವರ್ಣಭೂಮಿ ಮತ್ತು ಔದ್ಯಮಿಕ ಪ್ರಮುಖ ನಗರ. ೧೯೬೭ರಲ್ಲಿ ಇಲ್ಲಿ ಭಾರತ್ ಅರ್ತ್‌ಮೂವರ್ಸ್ ಕಾರ್ಖಾನೆ ಸ್ಥಾಪಿತಗೊಂಡು ನಗರಕ್ಕೆ ಹೊಸ ಕಳೆಯನ್ನು ತಂದಿತು. ಈ ಕಾರ್ಖಾನೆಯು ಸ್ಥಾಪಿತವಾಗುತ್ತಿದ್ದಂತೆಯೇ ರಾಜ್ಯದ ನಾನಾಕಡೆಗಳಿಂದ ಆಗಮಿಸಿದ ಕನ್ನಡ ಬಾಂಧವರು ತಮ್ಮ ವೃತ್ತಿಯೊಡನೆ ನಾಡಿನ ಸಂಸ್ಕೃತಿ, ಕಲೆ, ಸಾಹಿತ್ಯ ಮುಂತಾದ ಚಟುವಟಿಕೆಗಳನ್ನು ಮುಂದುವರಿಸಲು ಒಗ್ಗಟ್ಟಿನಿಂದ ಒಂದಾಗಿ ಕನ್ನಡನುಡಿಯ ಸಿರಿತನವನ್ನು ಎತ್ತಿಹಿಡಿಯಲು ಕನ್ನಡ ಮಿತ್ರರು ಸಂಸ್ಥೆಯನ್ನು ಸ್ಥಾಪಿಸಿಕೊಂಡರು. ತನ್ನದೇ ಆದ ಕೆಲವು ಧ್ಯೇಯಗಳನ್ನು ಮತ್ತು ಗುರಿಯನ್ನೂ ಹೊಂದಿ ೧೯೬೭ರ ರಾಜ್ಯೋತ್ಸವದೊಂದಿಗೆ ಕನ್ನಡ ಮಿತ್ರರು ಕಾರ್ಯೋನ್ಮುಖವಾಯಿತು.

ಕಾರ್ಖಾನೆಯ ಬೆಳವಣಿಗೆಯೊಂದಿಗೆ ಸ್ಪರ್ಧೆನಡೆಸುತ್ತಿದೆಯೇನೋ ಎಂಬಂತೆ ಕಳೆದ ಒಂದೂವರೆದಶಕಗಳಿಂದ ಕನ್ನಡ ಮಿತ್ರರು ತನ್ನ ಕಾರ್ಯಶ್ರೀಮಂತಿಕೆಯಿಂದ ನಾಡಿನಲ್ಲಿಯೇ ತನ್ನದೇ ಆದ ಸ್ಥಾನಮಾನಗಳಿಸಿರುವುದು ಮತ್ತು ಗಡಿಯಲ್ಲಿ ಕನ್ನಡದ ಕಂಪನ್ನು ಸದಾ ಪಸರಿಸುವಂತೆಮಾಡುತ್ತ ಅಡಿಯ ಮುಂದಡಿ ಇಡುತ್ತಾ ಸಾಗಿರುವುದು ಹೆಮ್ಮೆಯ ಸಂಗತಿ.

ನಾಟಕೋತ್ಸವ, ಸಂಗೀತೋತ್ಸವ, ಕಲಾ ಮಹೋತ್ಸವ ಮುಂತಾದುವುಗಳನ್ನು ನಡೆಸಿ ನಾಡಿನ ಪ್ರಮುಖ ಸಾಹಿತಿಗಳನ್ನು ಕಲಾವಿದರನ್ನು ಕರೆಯಿಸಿ ಉಪನ್ಯಾಸ, ವಿಚಾರಗೋಷ್ಠಿ, ಸನ್ಮಾನ ಮುಂತಾದುವುಗಳನ್ನು ಏರ್ಪಡಿಸುತ್ತಾ ಬಂದಿದೆ. ವಿಶ್ವ-ವಿದ್ಯಾಲಯಗಳ ಸಹಕಾರದೊಂದಿಗೆ ಭಾಷಣ ಸಪ್ತಾಯವನ್ನೂ, ರಾಜ್ಯ ವಾರ್ತಾ ಮತ್ತು ಪ್ರಚಾರ ಇಲಾಖೆ ಮತ್ತು ಕನ್ನಡ ಸಂಸ್ಕೃತಿ ನಿರ್ದೇಶನಾಲಯಗಳ ಸಹಕಾರದೊಂದಿಗೆ ಚಲನಚಿತ್ರೋತ್ಸವ ಮತ್ತು ಸಂಸ್ಕೃತಿ ಸುದಿನಗಳನ್ನು ಏರ್ಪಡಿಸಿದೆ. ವರ್ಷಪೂರ್ತಿ ಕನ್ನಡದರಥ ಸುವ್ಯವಸ್ಥಿತವಾಗಿ ಸಾಗುವಂತೆ ಮಾಡಿಕೊಂಡು ಬಂದಿರುವುದು ಹೆಮ್ಮೆಯ ಸಾಧನೆ. ಕನ್ನಡ ಮಿತ್ರರು ಕಲಾವಿದರು ರಾಜ್ಯದ ವಿವಿಧ ಭಾಗಗಳಲ್ಲಿ ನಾಟಕ ಸ್ಪರ್ಧೆ, ಸಂಗೀತಸ್ಪರ್ಧೆ ಮುಂತಾದುವುಗಳಲ್ಲಿ ಭಾಗವಹಿಸಿ ಅನೇಕ ಬಹುಮಾನಗಳನ್ನು ಗಳಿಸಿದ ಕೀರ್ತಿಗೆ ಪಾತ್ರರಾಗಿದ್ದಾರೆ.

ಈ ರೀತಿಯಾಗಿ ದಿನೇ ದಿನೇ ಪ್ರಬುದ್ಧ ಮಾನಕ್ಕೆ ಬರುತ್ತಿದ್ದ ಸಂಸ್ಥೆಗೆ ಒಂದು ಸುಸಜ್ಜಿತ ಕಾರ್ಯಾಲಯ ಮತ್ತು ಗ್ರಂಥಾಲಯ ಅತ್ಯಂತ ಆವಶ್ಯಕವಾಗಿತ್ತು. ಇದಕ್ಕಾಗಿ ಒಂದು ಸ್ವಂತ ಕಟ್ಟಡವನ್ನು ಹೊಂದಲು ೧೯೭೫ರಲ್ಲಿ 'ಕಟ್ಟಡ ನಿರ್ಮಾಣ ಸಮಿತಿ' ಯನ್ನು ರಚಿಸಲಾಯಿತು. ೧೯೭೭ರಲ್ಲಿ ಬಿಮೆಲ್ ನಗರದ ಪಕ್ಕದಲ್ಲಿರುವ ವಿಜಯನಗರ ಬಡಾವಣೆಯಲ್ಲಿ ಕಟ್ಟಡಕ್ಕಾಗಿ ೩೦'×೫೭' ನಿವೇಶನವನ್ನು ಖರೀದಿಸಲಾಯಿತು. ಕಟ್ಟಡ ನಿರ್ಮಾಣಕ್ಕಾಗಿ ನಿಧಿಯನ್ನು ಸಂಗ್ರಹಿಸಲು ಪ್ರಾರಂಭಿಸಿ ೧೭-೧೦-೭೭ ರಂದು ಖ್ಯಾತ ಚಲನಚಿತ್ರ ಹಿನ್ನಲೆ ಗಾಯಕ-ಗಾಯಕಿಯರಾದ ಶ್ರೀ ಪಿ. ಬಿ. ಶ್ರೀನಿವಾಸ್ ಮತ್ತು ಶ್ರೀಮತಿ ಬಿ. ಕೆ. ಸುಮಿತ್ರರವರಿಂದ "ಸಂಗೀತ ಸಂಜೆ" ಸಹಾಯಾರ್ಥ ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಲಾಯಿತು. ಕಟ್ಟಡ ನಿರ್ಮಾಣದ ಹಂತದಲ್ಲಿ ಹಣದ ಕೊರತೆ ಕಂಡುಬಂದಾಗ ೨೫-೫-೮೩ ರಲ್ಲಿ ಅಂತರರಾಷ್ಟ್ರೀಯ ಖ್ಯಾತಿಯ ಪ್ರಭಾತ್ ಕಲಾವಿದರಿಂದ 'ಸಿಂಡ್ರೆಲಾ' ನೃತ್ಯರೂಪಕದ ಸಹಾಯಾರ್ಥ ಪ್ರದರ್ಶನವನ್ನು ಏರ್ಪಡಿಸಿ ಕಟ್ಟಡದ ಮೊದಲನೆಯ ಹಂತದ ಕಾರ್ಯವನ್ನು ಪೂರ್ತಿಗೊಳಿಸಲಾಯಿತು.

ಇದೀಗ ನಮ್ಮದೇ ಆದ ಸ್ವಂತ ಕಟ್ಟಡ ನಿರ್ಮಾಣವಾಗಿ ನಿಮ್ಮೆಲ್ಲರ ಅಭಿಮಾನದ ಪ್ರತೀಕವಾಗಿ ಕಂಗೊಳಿಸುತ್ತಿದೆ. ಈ ಬೃಹತ್ ಯೋಜನೆಯನ್ನು ಕಾರ್ಯಗತಗೊಳಿಸಲು ಕನ್ನಡ ಮಿತ್ರರ ಸದಭಿಮಾನಿ ಸದಸ್ಯರುಗಳು ಉದಾರತೆಯಿಂದ ಬೆಂಬಲಿಸಿದ್ದಾರೆ. ನಿರ್ಮಾಣದ ಎಲ್ಲ ಹಂತಗಳಲ್ಲೂ ಉತ್ಸಾಹಿ ನಿರ್ವಾಹಕರಾದ ಶ್ರೀ ಎಸ್. ನಟೇಶ್‌ಮೂರ್ತಿಯವರು ತಮ್ಮ ಶಕ್ತಿಮೀರಿ ಸಹಕರಿಸಿದ್ದಾರೆ. ಕಟ್ಟಡವನ್ನು ಸರ್ವಾಂಗ ಸುಂದರವನ್ನಾಗಿ ಮಾಡಲು ಎನ್. ರಾಮರೆಡ್ಡಿ ಸಂಸ್ಥೆಯ ಶ್ರೀ ವೆಂಕಟೇಶ್‌ರವರು ವಿಶೇಷ ಕೊಡುಗೆಗಳನ್ನಿತ್ತಿದ್ದಾರೆ. ಪ್ರಧಾನ ಸಮಿತಿ, ಕಟ್ಟಡ ನಿರ್ಮಾಣ ಸಮಿತಿ ಮತ್ತು ವಸುಂಧರಾ ವಿಶೇಷ ಸಮಿತಿಗಳ ಕಾರ್ಯ ನಿರ್ವಹಿಸಿ ಪ್ರೋತ್ಸಾಹ ನೀಡಿದ ಶ್ರೀಯುತರುಗಳಾದ ಗೋವಿಂದರಾವ್, ಎಂ. ಎಸ್. ವೆಂಕಟೇಶಯ್ಯ, ಸಿ. ಎನ್. ಶ್ರೀಕಂಠರಾವ್, ಎಸ್. ಆರ್. ಸೀತಾರಾಂ, ನಾರಾಯಣರಾವ್, ಎಸ್.ಆರ್. ರಂಗನಾಥರಾವ್, ಹೆಚ್.ವಿ. ಶ್ರೀನಿವಾಸ್ ಎಸ್. ಆರ್. ಪ್ರಭಾಕರ್, ದಿ|| ಕೆ. ವೇಣುಗೋಪಾಲ್ ಮುಂತಾದವರುಗಳ ಪಾತ್ರ ಮಹತ್ತರವಾದದು ಹಾಗೂ ಮರೆಯಲಾಗದು. ಈ ಎಲ್ಲ ಮಹನೀಯರುಗಳಿಗೂ ವಿವಿಧ ಸಮಿತಿಗಳಲ್ಲಿ ಸೇವೆ ಸಲ್ಲಿಸಿದ ಕಾರ್ಯಕರ್ತರುಗಳಿಗೂ ಅಭಿಮಾನಿ ಸದಸ್ಯ ವೃಂದಕ್ಕೂ ನಮ್ಮ ಕೃತಜ್ಞತೆಗಳನ್ನು ಅರ್ಪಿಸುತ್ತಿದ್ದೇವೆ. ನಮ್ಮ ಎಲ್ಲ ಕಾರ್ಯ ಚಟುವಟಿಕೆಗಳಿಗೂ ಸದಾ ಬೆಂಬಲ ನೀಡುತ್ತಾ ಬಂದಿರುವ ಬಿ.ಇ.ಎಂ.ಎಲ್. ಆಡಳಿತವರ್ಗ, ಕಾರ್ಮಿಕ ಕಲ್ಯಾಣ ನಿಧಿ, ರಾಜ್ಯ ವಾರ್ತಾ ಮತ್ತು ಪ್ರಚಾರ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರುಗಳಿಗೂ ನಮ್ಮ ಹೃತ್ಪೂರ್ವಕ ಧನ್ಯವಾದಗಳು. ಕಟ್ಟಡದ ಪ್ರಾರಂಭೋತ್ಸವವನ್ನು ಚಿರಸ್ಮರಣೀಯವನ್ನಾಗಿ ಮಾಡಲು ವಸುಂಧರಾ-ಕಾವ್ಯಮಂದಾರವು ಹಸಿರು ತೋರಣವನ್ನು ಕಟ್ಟುತ್ತಿದೆ. ಇದಕ್ಕೆ ನೆರವಾದ ಎಲ್ಲ ಮಹನೀಯರಿಗೂ ಮತ್ತು ಸಂಪಾದಕ ಮಂಡಳಿಯವರಿಗೂ ನಮ್ಮ ಅನಂತ ಧನ್ಯವಾದಗಳು.

‘ಕನ್ನಡದ ಕಣ್ವ’ ರೆಂದೆನಿಸಿ ಅಮರರಾದ ಬಿ. ಎಂ. ಶ್ರೀಕಂಠಯ್ಯನವರ ಜನ್ಮ ಶತಾಬ್ದಿಯ ವರ್ಷವಿದು. ಅಂತಹ ಮಹಾನ್ ವ್ಯಕ್ತಿಗೆ ನಮ್ಮೆಲ್ಲರ ಸ್ವಾಭಿಮಾನದಸೌಧ ವನ್ನು ಅರ್ಪಿಸುವುದು ಹೆಮ್ಮೆಯ-ಹಿರಿಮೆಯ ಕಾರ್ಯ. ಸಮಸ್ತ ಸದಸ್ಯರ ಅಭೀಷ್ಟದಂತೆ ಈ ಕಟ್ಟಡಕ್ಕೆ ಬಿಎಂಶ್ರೀ ಭವನ ಎಂಬ ನಾಮಕರಣದೊಡನೆ ಗೌರವಾರ್ಪಣೆ ಮಾಡುತ್ತಿರುವವರಲ್ಲಿ ನಾವು ರಾಜ್ಯದಲ್ಲೇ ಮೊದಲಿಗರಾಗುತ್ತಿದ್ದೇವೆ. ಈ ಮಹತ್ವ ಪೂರ್ಣವಾದ ಸಂದರ್ಭದಲ್ಲಿ ಭಾಗವಹಿಸಲು ನಾಡಿನ ಹಿರಿಯ ಸಾಹಿತಿ-ಸಂಶೋಧಕ ಮತ್ತು ಬಿ. ಎಂ. ಶ್ರೀ ಪ್ರತಿಷ್ಠಾನದ ಶ್ರೀ ಎಂ. ವಿ. ಸೀತಾರಾಮಯ್ಯ ಮತ್ತು ಕನ್ನಡದ ಮಹಾ ಸಾರಥಿ ಜಿ. ನಾರಾಯಣರವರು ಒಪ್ಪಿಕೊಂಡಿರುವುದು ನಮ್ಮ ಭಾಗ್ಯ ಇವರಿಗೂ ನಮ್ಮ ಹೃತ್ಪೂರ್ವಕ ನಮನಗಳು.

ಕನ್ನಡದ ರಥ ಸದಾ ಸಾಗುತ್ತಿರಲಿ

ಆಳ್ ಕನ್ನಡ ತಾಯ್ ಬಾಳ್ ಕನ್ನಡ ತಾಯ್
ಕನ್ನಡಿಗರೊಡತಿ ಓ ರಾಜ ರಾಜೇಶ್ವರಿ ॥

# ಈ ಹಿಂದೆ ಕಾರ್ಯನಿರ್ವಹಿಸಿದ
# ಕಟ್ಟಡ ನಿರ್ಮಾಣ ಸಮಿತಿಗಳು

| ೧೯೭೫–೭೭ | ೧೯೭೮–೮೦ | ೧೯೮೦–೮೧ |
|---|---|---|

ಅಧ್ಯಕ್ಷರು :

ಶ್ರೀ ಎಂ. ಎಸ್. ವೆಂಕಟೇಶಯ್ಯ

| ೧೯೭೫–೭೭ | ೧೯೭೮–೮೦ | ೧೯೮೦–೮೧ |
|---|---|---|
| ಕಾರ್ಯದರ್ಶಿ : | ಕಾರ್ಯದರ್ಶಿ : | ಕಾರ್ಯದರ್ಶಿ : |
| ಚ. ನಾ. ಅನಂತರಾಂ | ಮ. ಪುಟ್ಟಸ್ವಾಮಿ | ಹೆಚ್. ವಿ. ರಮೇಶ್ |
| ಸಹ ಕಾರ್ಯದರ್ಶಿ : | ಸಹ ಕಾರ್ಯದರ್ಶಿ: | ಸಹ ಕಾರ್ಯದರ್ಶಿ : |
| ಎಸ್. ಎನ್. ಸುಬ್ಬರಾವ್ | ಚ. ನಾ. ಅನಂತರಾಂ | ಮ. ಪುಟ್ಟಸ್ವಾಮಿ |
| ಖಜಾಂಜಿ : | ಖಜಾಂಜಿ : | ಖಜಾಂಚಿ : |
| ಎಂ. ನಾರಾಯಣರಾವ್ | ಎಂ. ನಾರಾಯಣರಾವ್ | ಕೆ. ವಿ. ಶ್ರೀನಿವಾಸಮೂರ್ತಿ |
| ಸದಸ್ಯರು : | ಸದಸ್ಯರು : | ಸದಸ್ಯರು : |
| ಸಿ. ಎನ್. ಶ್ರೀಕಂಠರಾವ್ | ಸಿ.ಎನ್. ಶ್ರೀಕಂಠರಾವ್ | ಎಸ್.ಆರ್. ರಂಗನಾಥರಾವ |
| ಎಸ್. ಆರ್. ಪ್ರಭಾಕರ್ | ಎಸ್.ಆರ್. ಪ್ರಭಾಕರ್ | ಚ. ನಾ. ಅನಂತರಾಂ |
| ರಂಗನಾಥರಾವ್ | ರಂಗನಾಥರಾವ್ | ತ. ಶ್ರೀ. ಮಲ್ಲಿಕಾರ್ಜುನ |
| ಮ. ಪುಟ್ಟಸ್ವಾಮಿ | ಎಸ್.ಎನ್. ಸುಬ್ಬರಾವ್ | ಸಿದ್ದಲಿಂಗಪ್ಪ |
| ತ.ಶ್ರೀ. ಮಲ್ಲಿಕಾರ್ಜುನ | ತ. ಶ್ರೀ. ಮಲ್ಲಿಕಾರ್ಜುನ | ಎ. ಪಿ. ಪಟೇಲ್ |
| ವೆಂಕಟರಾಂ | ವೆಂಕಟರಾಂ | ರಂಗಸ್ವಾಮಿ ಶೆಟ್ಟಿ |
| | | ನಾಗರಾಜ ಪೋತ್ನಿಸ್ |
| | | ಡಾ॥ ಹ. ಶ್ರೀ. ಸುಬ್ರಹ್ಮಣ್ಯ |

# ಕನ್ನಡ ಮಿತ್ರರು - ಕಟ್ಟಡ ನಿರ್ಮಾಣ ಸಮಿತಿ



ಕುಳಿತಿರುವವರು : ಸಿ.ಕೆ. ಚಂದ್ರಶೇಖರ್, ಎಸ್.ಆರ್. ರಂಗನಾಥರಾವ್, ವಿ.ಎಸ್. ವೆಂಕಟನಾಥನ್, ಎಸ್ ಆರ್. ಪ್ರಭಾಕರ್, ಕೆ.ವಿ. ಶ್ರೀನಿವಾಸಮೂರ್ತಿ, ಎಸ್. ಸತೀಶ್‌ಮೂರ್ತಿ.
ನಿಂತಿರುವವರು : ಮಾ. ಪುಟ್ಟಸ್ವಾಮಿ, ಅ. ನ. ಲಕ್ಷ್ಮಣಮೂರ್ತಿ, ರಂಗಸ್ವಾಮಿ ಶೆಟ್ಟಿ, ಹೆಚ್. ವಿ. ರಮೇಶ್, ಎಸ್. ಪಿ. ಪಟೇಲ್, ತಾವರೆಕೆರೆ ಸುಬ್ರಮಣ್ಯಂ, ಅರವಿಂದಕಟ್ಟಿ ಸಿದ್ದಲಿಂಗಪ್ಪ, ಚ. ನಾ. ಅನಂತರಾಂ, ಎಂ. ಎಸ್. ಜಯರಾಂ.

---

# ಕನ್ನಡ ಮಿತ್ರರು - ಕಾರ್ಯಕಾರಿ ಸಮಿತಿ ೧೯೮೨-೮೩



ಕುಳಿತಿರುವವರು : ಲಕ್ಷ್ಮೀನಾರಾಯಣ್, ಸಿ.ಕೆ. ಚಂದ್ರಶೇಖರ್, ವಿ.ಎಸ್. ವೆಂಕಟನಾಥನ್, ಕೆ.ವಿ. ಶ್ರೀನಿವಾಸಮೂರ್ತಿ, ಕೈವಾರ್ ಗೋಪಿನಾಥ್, ಎಂ. ಎಸ್. ಜಯರಾಂ.
ನಿಂತಿರುವವರು : ಎಸ್. ಪಿ. ಪಟೇಲ್, ಲಕ್ಷ್ಮಯ್ಯ, ಹನುಮೇಗೌಡ, ಉಮಾಪತಿ, ಕೆ. ರಾಮಕೃಷ್ಣ, ಡಿ. ಭಾನುಮೂರ್ತಿ.

# ಶಂಕುಸ್ಥಾಪನಾ ಸಮಾರಂಭ



ಶಂಕುಸ್ಥಾಪನೆಯನ್ನು ನೆರವೇರಿಸಿದ ಶ್ರೀ ಬಿ.ಆರ್. ಶ್ರೀನಿವಾಸಮೂರ್ತಿಯವರೊಂದಿಗೆ
ಮುಖ್ಯ ಅತಿಥಿಗಳಾಗಿದ್ದ ಶ್ರೀ ಗೋಪಾಲಕೃಷ್ಣ ಅಡಿಗ,
ಶ್ರೀ ಎಂ.ಎಸ್. ವೆಂಕಟೇಶಯ್ಯ, ಶ್ರೀ ಗೋವಿಂದರಾವ್ ಮತ್ತಿತರರು.

# ಸಹಾಯಾರ್ಥ ಪ್ರದರ್ಶನ



ಬೆಮೆಲ್ ನಗರದ ಬಯಲು ರಂಗಮಂದಿರದಲ್ಲಿ ಅಂತರರಾಷ್ಟ್ರೀಯ ಖ್ಯಾತಿಯ
ಪ್ರಭಾತ್ ಕಲಾವಿದರಿಂದ 'ಸಿಂಡ್ರೆಲಾ' ನೃತ್ಯರೂಪಕ

# ಸೃಷ್ಟಿ

★ ಕೈವಾರ್ ಗೋಪಿನಾಥ್

ಅಂದು
ನೀ ಕಣ್ಣಲ್ಲಿ ಕಂಡ ಆ ಮಿಂಚು
ನನಗೆ ಗೊತ್ತಿತ್ತು
ಅದು ನಿನ್ನ ಸಂಚು
ಆದರೂ
ಬಿದ್ದೆ ನೀ ಬೀಸಿದಾ ಬಲೆಗೆ
ನಡದೆ ಇರುಳಲ್ಲಿ
ಆ ವಿಶ್ವರೂಪದಾ ಕಡೆಗೆ
ಎಲ್ಲೆಲ್ಲಿ ನೋಡಿದರೂ
ನೀನೇ ನೀನಾಗಿ
ಬಳಸಿದ್ದೆ
ಬಯಕೆಗಳ ಮಾಲೆಯಾಗಿ
ಅತ್ತ ರವಿಯು ಹೊಂಗಿರಣ
ಇತ್ತ ಕಾಮನ ಬಿಲ್ಲು
ಎರಡರ ನಡುವೆ
ವರುಣ ತೂರಿದ ಆಲಿಕಲ್ಲು
ಆಲಿಕಲ್ಲು ಕರಗಿ ನೀರಾಗಿ
ಗುಪ್ತಗಾಮಿನಿಯಾಗಿ
ಪದರ ಪದರದೊಳು ಹರಿದು
ಹೊಸ ಜೀವಿಯಾಗಿ
ಪ್ರಕೃತಿಯ ವರದಾನ
ಹೊರ ಜಗಕೆ ಬಂದಾಯ್ತು
ಕೋಟಿ ಜೀವರಾಶಿಗಳಲಿ
ಒಂದಾಗಿ ಬೆರೆತಾಯ್ತು.

ಕನ್ನಡ ಮೂಲಕವೇ ಕರ್ನಾಟಕದ ಮೋಕ್ಷ — ತಿ. ತಾ. ಶರ್ಮ

# ಭಾವ.......

★ ಶೇ. ನಾ. ಕುಲಕರ್ಣಿ

ಗರಿಗೆದರಿ ಬರುತಿರುವ
ಭಾವನೆಗಳ ಭಾರಕೆ
ಹೃದಯ ತರಗೆಲೆಯಂತೆ
ನಡುನಡುಗಿ ಅಂಜುತಿದೆ.

ಅದೇನೋ ಚಿತ್ರಗಳು
ತಮ್ಮಿಚ್ಚ ಒತ್ತುತಿರೆ
ಮನವು ಬೆದರಿದ ಬೊಂಬೆ
ದೇಹ ನಲುಗುವ ಕೊಂಬೆ
ಆಸರೆಯ ಆಸೆ ....
ಗರಿಗೆದರಿ ಸುತ್ತುತಿದೆ – ಮತ್ತೆ

ಆಗಸದ ಆ ನೀಲಿ ಬಣ್ಣ
ಆಳಸಾಗರದಂತೆ ಅದೇ
ಉನ್ಮಾದವುಕ್ಕಿ ತೆರೆಯೇರುತಿರೆ
ತಳವ ಕಾಣುವ ಬಯಕೆ
ಮನದಿ ಇದ್ದರೂ ಕೂಡ
ದೇಹವೇ ಮೇಲೆದ್ದು ಗಾಳಿಯಲಿ ತೇಲುತಿದೆ.

'ಭಾವ' ಬಳುಕುವ ಜೀವ
ಗಾಳಿ ಸುಳಿದರೂ ಕೂಡ
ಅದೇ ಒಂದು ತಡೆಯಾಗಿ
ಇಡಿಯಾಗಿರುವುದೆಲ್ಲಾ ಒಡೆದು ಚೂರು !!
ಚೂರಗಳನೆತ್ತಿ ಒತ್ತಟ್ಟಗಿಟ್ಟಾಗ
ಅದೇನೋ ಒಂದು ಕವಿತೆ !!

---

ಕನ್ನಡದ ದರ್ಶನದಿಂದಲೆ ಕನ್ನಡಿಗರ ಭಾವೈಕ್ಯ

— ರಂ. ಶ್ರೀ ಮುಗಳಿ

---

# ಪ್ರೇಯಸಿ

★ ರಮೇಶ ಚಂದ್ರ

ಎಲೆಗಳ ನಡುವೆ ಅರಳಿಹ ಹೂವೆ
ನನ್ನಯ ಕನಸನು ಉಸಿರುವೆನು
ನನ್ನಯುಗೆಳತೀ ಒಲವಿನ ಒಡತಿಯ
ಕಿವಿಯಲಿ ನೀನಿದ ಉಲಿಯುವೆಯಾ ?

ಮೊದಲಿನ ನೋಟದ ಚಣದಲಿ ನನ್ನನು
ನಾನೇ ಮರೆತು ಬೆರಗಾದೆ
ಎದೆಯಲಿ ಮಧುರದ ಮಧುವಿನ ಕಡಲಿನ
ಅಲೆಗಳ ಭರತಕೆ ಗುರಿಯಾದೆ.

ಪ್ರೇಯಸಿ ನನ್ನಯ ಕನಸಿನರೂಪಸಿ
ಕೋಮಲಕಾಮಿನಿ ಶ್ಯಾಮಲೆಯ
ಕಂಡಿಹ ನಿಮಿಷದಿ ನನ್ನಯುದೆಲ್ಲವ
ಅರ್ಪಿಸಿ ಅವಳಿಗೆ ಬಳಲಿಹೆನು.

ಗಿರಿಗಳ ನಡುವಲಿ ಕಾಡಿನ ಬನದಲಿ
ನದಿಗಳ ಮಡಿಲಲಿ ತೇಲಾಡೀ
ಉದಿಸಿದ ನೂತನ ಭಾವದ ಚೇತನ
ಕವನವು ಬಯಸಿದೆ ಜೊತೆಗಾಗಿ.

ನನ್ನಯ ಕನಸಿನ ನೇಹಿಗ ಹೂವೆ
ವಿರಹವನ್ನೆಲ್ಲವ ಉಸಿರುವೆಯಾ
ಅವಳಿದಿರಾಗಕೆ ನನ್ನಯಹಾಡನು
ಬಿಸೆಯುತ ಸಂತಸ ಹರಿಸುವೆಯಾ ?

# ಮೂರ್ಖ ಪಂಚಕ

★ ರು. ಶ್ರೀ ಬಾಲಕೃಷ್ಣಮೂರ್ತಿ

ತಿಳಿದವನ ಸುಲಭದಿ ಮೆಚ್ಚಿಸಬಹುದು ನೀ
ಪಂಡಿತನ ಸುಲಭದೊಳಿನ್ನೂ
ತಿಳಿಯದ ಮೂರ್ಖ ಮೆಚ್ಚಿಪುದಸದಳ
ಬ್ರಹ್ಮಗು ತಿಳಿದಿಲ್ಲವಿನ್ನೂ ॥ ೧ ॥

ಹಿಂಡುತ ಮರಳನು ಎಣ್ಣೆಯ ತೆಗೆಯಲು
ಬರಿ ಕೈಯಿ ನೋಯುವುದೆಂತು
ಮೂರ್ಖನ ಜತೆಯಲಿ ವಾದವಮಾಡಲು
ಬರಿ ಬಾಯಿ ನೋಯುವುದಂತು ॥ ೨ ॥

ಸರ್ಕಾರ ಪರಿಗೋಲು ಸುತ್ತೆಲ್ಲ ತೆರೆಗಳು
ಮೂರ್ಖರು ನಡೆಸುತಲಿಹರು
ದಡಸೇರದಾದಾಗ ತಪ್ಪಾರದೆಂದರೆ
ತೋರುವರಸ್ಯರಸಿವರು ॥ ೩ ॥

ಮೂರ್ಖರ ಕೈಯಿನ ಅಧಿಕಾರವದುನೋಡು
ಕಟುಕನ ಕೈಯಿನ ಕತ್ತಿ
ಸುಜನರ ಕೈಯಿನ ಅಧಿಕಾರವದು ತಾನು
ವೈದ್ಯನ ಕೈಯಿನ ಚಾಕು ॥ ೪ ॥

ನಾಲಿಗೆ ಬೈದಾಡೆ ಕೊಟ್ಟರು ದವಡೆಗೆ
ಹಲ್ಲುಗಳುದುರಿತು ನಾಕು
ಯಾರೋ ಮಾಡಿದ ತಪ್ಪಿಗೆ ದಂಡವ
ತೆತ್ತರು ಮತ್ತಾರೋ ಕೊನೆಗೆ ॥ ೫ ॥

# ಅಭಿಪ್ರಾಯಗಳು

★ ಯಂ. ಗಣಪತಿ ಭಟ್

ಕನ್ನಡದಿ ಭಾಷಣ ಮಾಡಿ
ಕನ್ನಡದಿ ಆಡಿ, ಹಾರಾಡಿ, ಆದರೂ
ಕಾಡಿ, ಬೇಡಿ, ಹೋರಾಡಿಯಾದರೂ
ಹಗಲು ರಾತ್ರಿ ಕಾದು ನಿಂತಾದರೂ
ಮಕ್ಕಳನು ಕಾನ್ವೆಂಟಿಗೆ ಸೇರಿಸಿ
ನಮ್ಮ ಕನ್ನಡದ ಹಿರಿ ಕವಿ – ಸಾಹಿತಿಗಳೆಲ್ಲ
ಇಂಗ್ಲೀಷ್ ಲೆಕ್ಚರರು, ಆಂಗ್ಲಭಾಷಾ ಕೋವಿದರು
ಎಂದನುತ ಸಮಾಧಾನ ಪಟ್ಟುಕೊಳ್ಳಿ
ಆವರೂ ಒಂದು ಸಂಶಯ
ರಾಮಾಯಣ, ಭಾರತದ ಕವಿಗಳು ?
ಅದಕ್ಕೇರಿ ನಾನಂದದ್ದು ಅವು
ಕೇವಲ 'ಶಾರದಾಪೂಜೆ' ಗೆ ಲಾಯಕ್ಕು
ಗಾಂಪಶಿಷ್ಯರಲ್ಲಿ ಒಬ್ಬರಾದರೂ
ನಿಮ್ಮ ಮಕ್ಕಳಾಗಿದ್ದರೆ
ಸೇರಿಸಿ ಕನ್ನಡ- ಕಲಿಯಲಿಕೆ
ನಿಮ್ಮಂಥ ಇಕ್ಕೋಟಿ ಜನರಾದರೂ ಇರಬಹುದು ಸ್ವಾಮಿ
ಕನ್ನಡದುದ್ಧಾರಕೆ.
ಆದರೆ.... ನನ್ನ ತಲೆಕೆಟ್ಟ ಗೆಳೆಯನ ಅಭಿಪ್ರಾಯ
ಉಡಲು, ಉಣಲು, ಇರಲು, ಬೆಳೆಯಲು
ಕನ್ನಡದನೆಲ, ಪಾಠಕ್ಕೆ ಪರಭಾಷೆಯೇ ಬಲ
ಎಂದು ಕನ್ನಡವ ಬೆಳೆಯಲು ಬಿಡದ
ಬಂದಳಿಕೆ ಜನರ ಪತ್ತೆಹಚ್ಚಿ ಮೊದಲಿಗೆ
ಅವರ ಭಾವಚಿತ್ರವನ್ನಾದರೂ, ರಾಜ್ಯೋತ್ಸವದಂದು
ಗಲ್ಲಿಗೇರಿಸಬೇಕು, ಆಗಲೇ
ಉತ್ಸವಕ್ಕೊಂದು ಅರ್ಥಬಂದೀತು.

# ನೀಲ ವನಚರಿ.... ನೀ ನೇರಾಣಿ

★ ಬಿ. ಎ. ಎಸ್. ಕೊಟ್ರೇಶಿ

ಚೆಲುವೆ ನೀನು ವನಚರಿ ಲಲಿತೆ
ಚಲುವನೆಲ್ಲ ಹರಡಿ ಕರೆವೆ ಬಾ
ಎಂದು ಬಳಿ ಬಾ ಎಂದು ಉಲಿವೆ
ಬಂದು ನಾ ಎನಲು
ಚಂದದಿಂದ ಚಣದೊಳೆನ್ನ ಮನವ
ಸೂರೆಗೊಳುವೆ, ನೀ ನೀಲ ವನಚರಿ !
ಬಾರೆ ಬಾ ಬಳುಕಿ ಬಾ ಜಲಜ ನೇತ್ರೆ
ಜುಳು ಜುಳು ಕುಲು ಕುಲು ಹರಿವ ಪುಷ್ಕಲ
ಜಲಧಿ ಕಾಣ್ಬೆ, ಕಾಮನ ಬಿಲ್ಲಿನ ಬಿಂಬದ ಲಂಬಣ !
ಜವ್ವನ ತುಂಬಿ, ಜೊನ್ನ ಚೆಲ್ಲಿರುವೆ !
ಜೇನಂತೆ ತನಿಯಾಗಿ, ನೀನಿರುವೆ !
ಮಾವಿನ ತಳಿರು, ಚೆಂದಳಿರು
ತೆಂಗಿನ ತಾವು, ಬೆಲ್ವ
ತಾಳೆಯ ಕಂಪು, ಇಂಪು – ತುಡಿಯಲು
ತುಡಿತವು ನನ್ನಲಿ ನೂರ್ಮಡಿಸಿ
ಲಲಿತ ಲತೆಯೆ, ಲತಾಂಗಿಯೆ
ನೀ ನೆಲ್ಲವನು ತೆರೆಯಲಿರಿಸಿರುವೆ !
ಕಬ್ಬಿಗರಿಗೆ, ಕಬ್ಬಿಗರ ಕಲ್ಪನೆಗೆ
ನಾನೆಲ್ಲವನು ಸ್ಫುರಿಸುವೆ ಜೀವಿಗಳಿಗೆ
ಭಾವ ಜೀವಿಗಳಿಗೆ....
ಓ ದೇವಿ.... ವನದೇವಿ, ನೀ ನೇರಾಣಿ
ವನಚರ ನಾನಾಗಿ, ಕಾಣುವೆ, ನೀ ಕಣ್ಮಣಿ
ವಯ್ಯಾರಿ ಚಿತ್ರಾಂಗಿ ನೀ ನನ್ನ ರಾಣಿ
ವನಚರಿ, ವನದೇವಿ, ವನರಾಣಿ

# ಕಪ್ಪು ಹೊತ್ತಿಗೆಯಿಂದ

★ ಎಸ್. ಜಿ. ಶಿವಶಂಕರ್

ಓ ಘನತೆವೆತ್ತ ಪೀತ ಪ್ರಭುಗಳೆ
ಭೂಮಿಯೊಡಲಿಗೆ ಜಲ ಸಿಂಪಡಿಸಿ
ಮಡಿ ಮಾಡುವ ಪಂಡಿತ ಮಹೋದಯರೆ
ಶತಮಾನಗಳ ಕಾಲ ಸರಸ್ವತಿಯ ಮುಡಿ
ಹಿಡಿದು ಬಾಗಿಲೊಳಗೆ ಎಳೆದು
ಕದ ಜಡಿದ ದೇವದೂತರೆ
ಒಂದಿಷ್ಟು ಕರುಣೆ ತೋರಿ
ನಿಮ್ಮ ಅಗಾಧ ಪಾಂಡಿತ್ಯದಿಂದೊಂದಿಷ್ಟು
ಪರಿಹಾರ ಹೇಳುವಿರಾ ?
ದೊಡ್ಡಿಯಲ್ಲಿ ದನಗಳು ಉಚ್ಚುತ್ತಿವೆ
ಮಗಳ ಯೌವನ ಚುಚ್ಚುತ್ತಿದೆ
ಹೈಕಳು ನಿದ್ದೆಯಲ್ಲಿ ಬೆಚ್ಚುತ್ತವೆ
ಕೆಮ್ಮಿ ಸಾಯುತ್ತಿರುವ ಹೆಂಡತಿಗೆ
ಒಂದು ತಾಯಿತ ಕಟ್ಟಿ
ಶಾಲೆಗೆ ಹೋಗಲು ವರಾತ ಹಚ್ಚಿರುವ
ಹಟ್ಟಿಯ ಹೈದರಿಗೊಂದಿಷ್ಟು ಬುದ್ಧಿ ಹೇಳಿ
ಹೊಲ ಗದ್ದೆಗಳ ಕೂಲಿಗೆ ಹಚ್ಚುವಷ್ಟು ಮಾಡಿ
ನಿಮ್ಮ ಮಾತಲ್ಲಿ, ಆದರ ಮೋಡಿಯಲ್ಲಿ
ನಮಗೆಷ್ಟೊಂದು ವಿಶ್ವಾಸ !
ನೀವು ರೂಪಿಸಿದೀ ಸಮಾಜದ ರೀತಿ ರಿವಾಜುಗಳು
ಶತಮಾನಗಳು ಉಳಿದಾವು
ಚಂದ್ರನೆತ್ತರಕೂ ಬೆಳೆದಾವು
ಹಿಡಿ ಕೂಳಿಗೆ ಕೈಯೊಡ್ಡಿ
ನಿಮ್ಮ ರಸಿಕತೆಗೆ ಮೈಯೊಡ್ಡಿ
'ಘಂ' ಎನ್ನುವ ಕೊಳಚೆ ನಾರಲ್ಲಿ
ಬದುಕ ಸವೆಸುತ್ತೇವೆ

# ಸ್ಥಿತಿ

★ ನರಹರಿ

ಇವತ್ತಿನ ದಿನ – ಹಿಂದಿನ ದಿನದ ತಂಗಳು ಸುಖ,
ಹೊಟ್ಟೆಗೆ ಬಿದ್ದ ಮೇಲೆ
ಸುರುವಾಗುವ ಸಿಗರೇಟಿನಂತೆ
ಆರಾಮು ಖುರ್ಚಿ ಮೇಲಣ ವೇದಾಂತ ಹೊಗೆ
ಹಿಟ್ಟಿಲ್ಲದವರ ಹೊಟ್ಟೆಯ ಒಳಗಣ ತಳಮಳ
ಕುಳಿತು ಹೊಸೆಯುವವರ ಬಾಡಿಗೆ ನೂಲು
ಸುತ್ತಲೂ ಬಡಿಗೆಯ ದೊಂಬಿ, ಕೆಳಗೆ ಬಿದ್ದವರ ಆರ್ತ,
ತೊಗಲೊಳಗೆ ಮಾತ್ರ ಸ್ಥಿತಪ್ರಜ್ಞ ಉಪಸ್ಥಿತ.
ಗಂಟಲೊರಗೆ ಕುಡಿದ ಕಾಫಿ ರುಚಿಯಿದ್ದಾಗ–
ಮೊಸಳೆ ಕಣ್ಣೀರು ಧಾರಾಕಾರ
ಚಟಪಟ ಸಂಭಾಷಣೆ, ಛೇಡಿಸುವಿಕೆ,
ಎಲ್ಲಾ ಮರೆಸುವ ಮೋಹಕ ಕಾವ್ಯ.
ತಿಂದದ್ದೂ ಅರಗದೆ ಆಚೆಯೂ ಬಾರದ
ಕಮರತೇಗು.

---

ಸುಲಿದ ಬಾಳೆಯ ಹಣ್ಣಿನಂದದಿ
ಕಳೆದ ಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ ॥
ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ಮೋಕ್ಷವ
ಗಳಿಸಿಕೊಂಡರೆ ಸಾಲದೇ ಸಂಸ್ಕೃತದಲಿನ್ನೇನು ॥

— ಮುಹಲಿಂಗರಂಗ

# ಆಷಾಢ ಮಾಸ

★ ಡಿ. ಸುಬ್ರಹ್ಮಣ್ಯ

ಬಂದಿಹುದು ಬಂದಿಹುದು ಆಷಾಢ
ವಸಂತ ಕಳೆದು ಗ್ರೀಷ್ಮಮುನ್ನಡಿಟ್ಟಿರುವುದು.
ಗಾಳಿ ಚಳಿ ಸಮ್ಮಿಲನ ಗಗನದಲಿ ಮೋಡಗಳ ಚಲನೆ
ಸೂರ್ಯನಂ ಮರೆ ಮಾಡಿ, ಸೋನೆಯು ಅಮೃತವೃಷ್ಟಿ
ಇದುವೇ ಭುವಿಯ ಜನತೆ, ಸಂತುಷ್ಟಿ.
ಬಂದಿಹುದು ಬಂದಿಹುದು ! ಆಷಾಢ

ಶುಭವು ದೂರಾಗಿ ಮನಕೆ ಅತೃಪ್ತಿ
ಆಷಾಢ ಮೆಲ್ಲ ಮೆಲ್ಲನೆ ಚಲನೆ ಆಗ ಸಂತೃಪ್ತಿ
ಮನವೆಲ್ಲ ಮಬ್ಬು, ಇದುವೇ ಆಷಾಢದ ಹಿಗ್ಗು
ಋತುಚಕ್ರದ ಭ್ರಮಣ ಎಲ್ಲಿಡೆ ನಿರಸನ
ಬಂದಿಹುದು ಬಂದಿಹುದು ! ಆಷಾಢ

ಬಂದಿಹುದು ಆಯನಗಳ ಸಮ್ಮಿಶ್ರಣ
ಜೀವನದ ಹಂತಕ್ಕೆ ಇದು ಮಹಾಕಂಕಣ
ಕೋಗಿಲೆಯ ಸುಸ್ವರ ಧ್ವನಿ ಇಲ್ಲ.
ಬಂದಿಹುದು ಬಂದಿಹುದು ತಾನು ಒಂಟಿ ಎಂಬ ಭಯ ಇಲ್ಲ.
ಆಷಾಢ – ಮಾಸಕೆ ನಿಂದಿಸುವವರ ಭಯವಿಲ್ಲ.

---

ನೂರು ಕುಲಗಳು ಸೇರಿ ಕನ್ನಡದ ಕುಲವಾಗಿ
ಭಾರತಕೆ ಬಲವಾಗಿ ಬೆಳಗುತಿಹದು
'ಈ ಕುಲವ ಒಡೆಯದಿರಿ ಹೋರಾಡಿ ಮಡಿಯದಿರಿ'
ಎಂದು ಕನ್ನಡ ಕಹಳೆ ಮೊಳಗುತಿಹುದು.

— ಶಾಸ್ತ್ಯಾನಂದ

# ಚಿಂತೆಗಳು

★ ವೈ. ಸತೀಶ ಕುಮಾರ್

ಬಾವಿಯಲಿಳಿಸಿದ ಪಾತಾಳಗರಡಿಯಂತೆ
ಮನುಜನ ಮನದಾಳಕ್ಕಿಳಿದು,
ನೆಮ್ಮದಿಯ ಕುಂಭಕೆ ಸಿಲುಕುತ,
ಯಾತನೆಯ ತರಂಗಗಳನೆಬ್ಬಿಸುತ,
ಹುಚ್ಚೆಬ್ಬಿಸುತಿವೆ.
ಅಸಂಬದ್ಧ, ಅಸ್ಪಷ್ಟ ವಿಚಾರಗಳಲಿ
ತರಗೆಲೆಗಳಂತೆ ತೇಲಾಡಿಸುತಿವೆ.
ಚಿತ್ತಸ್ವಾಸ್ಥತೆಯನು ಕದಡಿ
ಅಸ್ವಾಸ್ಥತೆಯ ರೂಪನೀಡಿ
ತೊಳಲಾಡಿಸುತಿಹವು.
ಕೆರಳಿಸಿ, ಸೊರಗಿಸಿ, ಹಿಂಸೆಗೊಳಿಸುತಿವೆ.
ಆವೇಶ ಆವೇಗದಲಿ ಮುಳುಗಿಸಿ
ಜೀವಕೆ ಮುಳುವಾಗಿ ಸಾಗುತಿಹವು,
ದೇಹಕ್ಕಂಟಿಬಂದ ಜಾಡ್ಯದಂತೆ
ನಮ್ಮನಪ್ಪಳಿಸುತ ದುರ್ಬಲಗೊಳಿಸಿ
ಬಲಾಢ್ಯವಾಗಿ ಬೆಳೆದು ನಗುತಿಹವು : ಗಹಗಹಿಸಿ.
ತಾವಿಲ್ಲದಿರುವ ತಾಣದ ಮನವಿಲ್ಲೆಂಬಂತೆ
ತಮ್ಮಿರುವನು ಸಾರುತಿಹವು

---

ಕನ್ನಡಿಗರತಿಶಯವು ; ಭುವನೇಶ್ವರಿಯ ದಯವು :
ಕನ್ನಡಿಗರಿಗೆ ಜಯವು ; ಹಂಪೆಯಾಶ್ರಯವು

— ಬೆನಗಲ್ ರಾಮರಾವ್

---

# ವೀರ ಸಂಕಲ್ಪ

★ ಸಿದ್ದಲಿಂಗಪ್ಪ

ತಾಯೆ ಭುವನೇಶ್ವರಿಯೇ
ಕನ್ನಡ ಕುಲ ಕೋಟಿಯ ಮಹಾಮಾತೆ
ರಾಜರಾಜೇಶ್ವರಿ
ಏಕೀದುಃಖ ? ಏಕೀಮೌನ ?
ನಿನ್ನ ದುಃಖ ನೋಡಿದರೆ ಕನ್ನಡಿಗರು ಕಾರ್ಗತ್ತಲಲ್ಲಿ
ನಿಂತಂತಾಗಿದೆ. ತಾಯೇ ಕೃಪೆದೋರು ಏನಾಯಿತು
ಈ ನಿನ್ನ ಕನ್ನಡ ಕುಲಕೋಟಿಯಿಂದ.
ಕೋಟ್ಯಾಂತರ ಕನ್ನಡಿಗರಿದ್ದರೂ ನಿನ್ನ
ಮನೆಯಲ್ಲಿ ಗೌರವಾದರಗಳಿಲ್ಲ ಎಂಬ ನೋವು ಇದೆಯಾ ?
ಇಲ್ಲ, ನನ್ನ ಕುವರರು ನಿರಭಿಮಾನಿಗಳಾದರೆಂಬ
ವೇದನೆ ಇದೆಯಾ ? ತಾಯಿ ಜಗನ್ಮಾತೆ ನಿನ್ನ
ದಿವ್ಯ ಅನುಗ್ರಹದಿಂದ ಮಲಗಿದ್ದ ಜಡದಿಂದಿದ್ದ
ಕನ್ನಡಿಗರು ಎಚ್ಚೆತ್ತು
ನಾಡ ನುಡಿಗಾಗಿ ಹೋರಾಟದತ್ತ ಸಾಗುವಂತಾಗಲಿ
ಕನ್ನಡದ ಅಭಿಮಾನ ಕೇವಲ ನೆಪವಾಗದೆ
ನಿರಂತ ಧ್ವನಿಯಾಗಿ ನಿನ್ನನು ಅನುದಿನ
ಆರಾಧಿಸುವಂತೆ ಮಾಡು ತಾಯಿ.
ನಾವು ನಿರಭಿಮಾನಿಗಳಲ್ಲ, ನಿಶ್ಯಕ್ತರಲ್ಲ, ಸ್ವಾಭಿಮಾನಿಗಳು
–ಪರಾಕ್ರಮಿಗಳು ಇನ್ನು ಚಿಂತೆಬೇಡ ತಾಯಿ
ನಗು–ನಗುತ ನಮ್ಮನು ಹರಸು. ನುಡಿಗಾಗಿ ಅನವರತ
ಹೋರಾಡುವೆವು ಎಂದು ಪತ್ರಿಜ್ಞೆ ಮಾಡುತಿರುವೆವು.

---

ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ... 

ಯಾರಂಕುಶ ಮಿಟ್ಟೊಡಂ ನೆನವುದೆನ್ನ ಮನಂ ಬನವಾಸಿ ದೇಶಮಂ

— ಪಂಪ

# ಸೂರ್ಯ ಸಹಸ್ರ ಪದ್ಮ ಶತಕ (ಆಯ್ದ ಕೆಲವು ಭಾಗಗಳು)

★ ಸುಡ್ GOD ಮಿತ್ರ

ಈ ಕುಲಕೆ ಈ ದೇವ. ಆ ದೇವ ನೀಶ್ವರನು ಎಂದು,
ಆ ಕುಲಕೆ ಆದಿ ಮಾದೇವ ಅಲ್ಲಾ ಎಲ್ಲರೂ ಎಂದು,
ಜಗಳವಾಡುವರು ಇಂದು, ಇರುವುದೊಂದೇ ಬಿಂದು ।
ದೇವಪುರ ವೆಂಕಟರಮಣಾರ್ಯ ಕೇಳು ಹೇ ಸೂರ್ಯ ॥

ಮನುಜನೆ ಕೆತ್ತಿ ಕಡೆದ ಕಲ್ಲಿನಾ ವಿಗ್ರಹಕೆ,
ತನು ಶಕ್ತಿಯನಿತ್ತು ಎತ್ತಿ ಕೂಡಿಟ್ಟು ದೇಗುಲಕೆ;
ಅನುದಿನವು ಪೂಜೆಗೈದು ಭ್ರಾಂತಿಯಲ್ ಸುತ್ತುವರು
ದೇವಪುರ ವೆಂಕಟರಮಣಾರ್ಯ ಕೇಳು ಹೇ ಸೂರ್ಯ ॥

ಶವಕಂಡು ಅಳುತಿರುವೆ ಎಲೇ ಜೀವಶವವೇ !
ಆವಪುರುಷಾರ್ಥ ಪಡೆದೆಯೋ ಗುರುವಿಲ್ಲದಯೆ !!
ಗುರುಪಾದೋದಕ ಕುಡಿ ! ವೈರಾಗ್ಯ ದಾಹದಲಿಯೆ !!!
ದೇವಪುರ ವೆಂಕಟರಮಣಾರ್ಯ ಕೇಳು ಹೇ ಸೂರ್ಯ ॥

ದೇವಾಲಯಕೆ ಬೀಗವಹಾಕಿ ಬಂದಿಯಾಗಿರಲು,
ದೇವಾಲಯ ದೊಳಗಾತ ಚೋರನಂತೆ ಕುಳ್ಳಿರಲು,
ದೇವನಾ ಶಕ್ತಿ ಇರಲಾ ಬೀಗ ವ್ಯರ್ಥ್ಯ ಆಗಿರಲು,
ದೇವಪುರ ವೆಂಕಟರಮಣಾರ್ಯ ಕೇಳು ಹೇ ಸೂರ್ಯ ॥

ಗಂಡುಗಲಿಗಳು ಎಂದು ಗುಂಡುಬಿಡುವವರಿಂದು,
ತುಂಡರಿಸುವೆ ಪುಲಿಯನೆಂದು ಜಂಭ ಮಾಡುವರು :
ಗಂಡುಗಳು, ತಾಳಿ ಕಟ್ಟಿದೊಡೆ ಪೆಣ್ಗಳಾಗುವರು,
ದೇವಪುರ ವೆಂಕಟರಮಣಾರ್ಯ ಕೇಳು ಹೇ ಸೂರ್ಯ ॥

ಇರುವುದನು ಕೇಳುವೆ ಏಕೆ? ಎಲೆ ಮನುಜನೇ,
ಇಲ್ಲದೆ ಇರುವುದನು ಕೇಳು, ಕಲಿ ಯುವಕನೆ !
ಇದು ಇಲ್ಲದವನಾಗು ಈ ಇಂದ್ರವರ್ತುಲದಾಚೆ !!
ದೇವಪುರ ವೆಂಕಟರಮಣಾರ್ಯ ಕೇಳು ಹೇ ಸೂರ್ಯ ॥

# ನಂದಿಯನೇರಿ ಬಂದಾನೋ....

★ ಹೋ. ಶೇ. ನಾಗರಾಜರಾವ್

ನಂದಿಯನೇರಿ ಬಂದಾನೋ ಶಿವನು....
ನಂದಿಯನೇರಿ ಬಂದಾನೋ
ಮುಗಿಲೆತ್ತರಕು ಬೆಳೆದುನಿಂತ
ಗಿರಿಗಳಸಾಲಲ್ಲೀ ಬಂದಾನೊ....

ಗಿರಿಗಳ ಕೋಡಿಗೆ ಹಿಮವ ಹೊದ್ದಿಸಿ
ಕರೆದಾಳೋ.... ಗಂಗವ್ವ.... ಶಿವನ

ವನದಲ್ಲಿ ಆನೆಹಿಂಡು,
ಚಿಗುರೆಗಳಾದಂಡು, ನೆಗೆದಾಡಿ
ನೆಗೆದಾಡಿ, ನಂದಿಯಮೂಸಿ
ಶಿವನ ಆದರಿ ಕರೆದಾವೋ.... ॥ ನಂದಿಯ.... ॥

ಹಕ್ಕಿಗಳಾಗುಂಪು, ಕೋಗಿಲೆಯು ಅದರಲ್ಲಿ
ಗಿಳಿಗಳಾ.... ಕೂಡಿ ಕರದಾವೋ
'ಶಿವ' 'ಶಿವ'ನೆ ಶಿವನೆಂದು ಕರೆದಾವೋ.... ॥ ನಂದಿಯ.... ॥

ಝುರಿಗಳಾ ಜುಳು ಜುಳು
ಹೊಳೆಗಳಾ, ಹೊಂಡಗಳಾ
ತುಂಬಿ ತುಳುಕಿ ಗಂಗವ್ವ, ಶಿವನ
ಪಾದವ ತೊಳೆದಾಳೋ....

ತಂಪಾದ ಶಿವನು, ನಂದಿಯನೇರಿ ಬಂದಾನೋ....

---

ಬಾಳ್ ಕನ್ನಡ ತಾಯ್ ।
ಏಳ್ ಕನ್ನಡ ತಾಯ್ ।
ಆಳ್ ಕನ್ನಡ ತಾಯ್ ।
ಕನ್ನಡಿಗರೊಡತಿ ಓ ರಾಜೇಶ್ವರೀ ।

— ಬಿ. ಎಂ. ಶ್ರೀಕಂಠಯ್ಯ

# ಗುರುತಿಲ್ಲದವರು....

★ ಯಂಗಟಿ ಅನಂತು

ನಿಮ್ಮೆಲ್ಲರ ಅತಿಯಾಸೆಯು
ಅಂತರಿಕ್ಷಕ್ಕೆ ಏರಿದವರು, ಅಲ್ಲ
ನಿಮ್ಮ ಪಾಪದ ಸೋಪಾನದಿಂದ
ಪಾತಾಳಕ್ಕೆ ಜಾರಿದವರು
ನಾವು ಗುರುತಿಲ್ಲದವರು.

ಯಾರದೋ ಜೋಬು ಯಾರೋ ತುಂಬಿದ್ದಕ್ಕೆ
ಜೀವತೆತ್ತವರು
ನಂಬಿದವರ
ಎದೆಯಲ್ಲಿ
ನೋವ ಬಿತ್ತಿದವರು.

ಚಾಚಿದ ಕೈ, ಅದೇ ಬಾಚಿದ ಕೈ
ಕಣ್ಣೊರಸಿಕೊಂಡಾಗ
ದೇಹಕ್ಕಷ್ಟೆಂದು ಬೆಲೆಕಟ್ಟಿದಾಗ
ಮಣ್ಣಿನ ಮಡಿಲಲ್ಲೆ ಮಿಸುಕಾಡಿದವರು
ರಾಜಕೀಯದ ಚದುರಂಗದಾಟಕ್ಕೆ
ದಾಳವಾದವರು.

ಹಣದಾಹಿಗಳ ಬಾಯಿ
ಎಲ್ಲೆಲ್ಲಿ ಇನ್ನೆಷ್ಟು ತೆರೆದಿದೆಯೋ
ಭವ್ಯಬಂಗಲೆಗಳಡಿಯಲ್ಲಿ
ಗೋರಿ ಕಟ್ಟಲೆಂದೇ!
ಮೇಲೇರಿ ಜಾರಲು
ಇಲ್ಲವೆ ನಮ್ಮಂತಹವರ
ಹಸಿದವರ ಹಿಂಡು
ಗುರುತಿಲ್ಲದವರ ದಂಡು.

# ಭಾರತದ ಭೂಮಿಯಲಿ ಚಲಿಸುವ ಕಂದನೆ

★ ಇರ್‌ಶಾದ್ ಎಂ.

ಚಿನ್ನದ ಭೂಮಿಯ ಕರೆದಿಹುದು ನಿನ್ನ
ಕಾಡುಗುಡ್ಡೆಗಳಲಿ ನೆಲೆಸಿರುವೆ ನೀನು
ಗುಣವತುಂಬಿ ಗುಡ್ಡೆಗಳಲಿ ಬೆಳೆಯುವೆ ನೀನು
ಭಾರತದ ಭೂಮಿಯಲಿ ಚಲಿಸುವ ಕಂದನೆ

ಪರರಿಂದಲೀ ಶೋಭಿಸಿ ಚಲಿಸುವೆ ನೀನು
ನಿನ್ನ ಸ್ವರೂಪವಾ ಕಂಡು ಉರುಳುವರು
ಬೆಳದಿಂಗಳಲಿ ಕುಳಿತು ಬಣ್ಣಿಪರು ನಿನ್ನ
ಭಾರತದ ಭೂಮಿಯಲಿ ಚಲಿಸುವ ಕಂದನೆ.

ಗಜಗಜನೆಂದು ಘರ್ಜಿಸಿ ಆಕರ್ಷಿಸುವೆ ನೀನು
ನೆನೆಯುತಿಹರು ಚಿನ್ನದ ನಾಡಿನ ಬಣ್ಣವನು
ಅಪಾರ ಆಸೆ ತುಂಬಿ ನೋಡುವರು ನಿನ್ನ
ಭಾರತದ ಭೂಮಿಯಲಿ ಚಲಿಸುವ ಕಂದನೆ.

# ಹೊಂಗಿರಣ ಮೂಡಿದೆ!

★ ಎಸ್.ಪಿ. ಪಟೇಲ್

ಅಂದವಿದೆ ಚಂದವಿದೆ
ಗಂಧದ ಗೊಂಬೆಯಿದೆ
ಅವಯವದ ಆಭರಣವಿದೆ
ಆಸೆಯ ಅಂಶವಿದೆ
ಈರ್ವರಿಗೂ ಇಚ್ಛೆಯಿದೆ
ಸೇರುವ ಸಮಯವಿದೆ.

ತಂಗಾಳಿಯ ತಂಪು
ಕೆನ್ನೆಯ ಕೆಂಪು
ಕಣ್ಣಲ್ಲಿ ಕಾತುರ
ಮನದಲ್ಲಿ ಆತುರ
ಕಣ್ಣೆರೆದು ನೋಡಿದೆ
ಹೊಂಗಿರಣ ಮೂಡಿದೆ!

# ಅಪರಿಚಿತ ಕಣ್ಣು

★ ವಿ. ಶ್ರೀನಿವಾಸಮೂರ್ತಿ

ಬೀರಿತೊಂದ್ಹೆಣ್ ದೃಷ್ಠಿ ಎನ್ನೆಡೆ
ಮಾಡುತ ಎನ್ನಯ ಚಿತ್ತವಧೆ.
ಹರಿಸಲೆನ್ನ ದೃಷ್ಠಿ ಆ ಕಡೆ
ಸೂಚಿಸಿ ತಾ ದೃಷ್ಠಿ ತನ್ನಾಸೆ ಪದೇ ಪದೇ
ಹೆಜ್ಜಾಗಲೆನ್ನಾಸೆ ತಿಳಿಯಲಾದೃಷ್ಠಿಯೊಳಗಡಗಿರುವಾಸೆ
ಅಡ್ಡವಾಯ್ತು ವಿಧಿಯ ತೆರೆ ಮಾಡುತ ಎನ್ನ ನಿರಾಸೆ.
ಮಾಯವಾಯ್ತು ದೃಷ್ಠಿ ತಿಳಿಯದೆಡೆ
ಮೂಡಿಸುತ ಆ ಅಪರಿಚಿತ ಕಣ್ಣಿಂದ ಎನ್ ಮನದೊಳಗಡೆ.

# ಆಸೆಗಳು

★ ಎಚ್. ವೈ. ವಿಠಲ

ಏನೇನೊ ಆಸೆಗಳು ಮೂಡುತಿವೆ ಮನದಲ್ಲಿ
ಕವಿಯಾಗಬೇಕು ಕಲಿಯಾಗಬೇಕು ಕನ್ನಡದಿ ಕಲೆಯಬೇಕು
ಕನ್ನಡ ಕವಿಗಳ ಬೆರೆಯಬೇಕು
ಕನ್ನಡಾಂಬೆಯ ಪುತ್ರರಲ್ಲೊಂದಾಗಬೇಕು
ಕನ್ನಡವ ಜನಮನದಿ ನೆಲೆಗೊಳಿಸಬೇಕು
ಕನ್ನಡ ಸುಪುತ್ರರಿಗೆ ಮಣಿಯಬೇಕು.
ಕನ್ನಡನಾಡಿನಲಿ ಬೆಳೆದಿರುವ ವೃಕ್ಷದಲಿ
ಸುಂದರವಾದೊಂದು ಹೂವಾಗಿ ಅರಳಬೇಕು
ಹೊಯ್ಸಳರ ನಾಡಿನಲಿ ನೆಲೆಸಿರುವ ನಮ್ಮೂರ
ಶ್ರೀ ಲಕ್ಷ್ಮೀನಾರಾಯಣನ ಪದಕಮಲದಲ್ಲಿ
ಆ ಹೂವು ಮಿನುಗಬೇಕು.

# ಕಾವ್ಯಮಂದಾರದ ಕವಿಗಳು

**ಕೈವಾರ್ ಗೋಪಿನಾಥ್ :** ಖ್ಯಾತ ನಾಟಕಕರ್ತೃಗಳಾದ ಕೈವಾರ್ ರಾಜಾರಾಯರ ಪುತ್ರರು. ಇವರ ಹಲವು ಬರಹಗಳು ಪ್ರಕಟವಾಗಿವೆ. ಉತ್ತಮ ನಟರೂ ಆಗಿರುವ ಇವರು ಟೂಲ್ ರೂಂ ನಲ್ಲಿ ಇಂಜನೀಯರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಶೇ. ನಾ ಕುಲಕರ್ಣಿ :** ಉತ್ತಮ ವಿಮರ್ಶಕರು, ನಿರಂತರ ಅಧ್ಯಯನಶೀಲರು. ಕಾವ್ಯ ರಚನೆಯಲ್ಲಿ ವಿಶೇಷ ಒಲವುಳ್ಳವರಾದ ಇವರು ವಿದ್ಯಾರ್ಥಿ ದೆಸೆಯಲ್ಲಿ ಆಕಾಶವಾಣಿ ಯಲ್ಲಿನ ನಾಟಕ ಮತ್ತು ಕ್ವಿಜ್‌ನಲ್ಲಿ ಭಾಗವಹಿಸಿದ್ದಾರೆ. ನಾಟಕಗಳನ್ನು ನಿರ್ದೇಶಿಸಿದ್ದಾರೆ. ಮೆಶೀನ್ ಷಾಪಿನ ಇಂಟರ್‌ನಲ್ ಪ್ರೊಗ್ರೆಸ್ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

ರಮೇಶಚಂದ್ರ : ನಿಜನಾಮಧೇಯ ಹೆಚ್. ವಿ. ರಮೇಶ್. ಉತ್ತಮ ನಟರು ಮತ್ತು ನಿರ್ದೇಶಕರೂ ಆಗಿರುವ ಇವರ ಹಲವಾರು ಕಿರುಕತೆಗಳು ಕವನಗಳು ಮತ್ತು 'ನಾ ಕೊಂದ ಹುಡುಗಿ' ನಾಟಕ ಪ್ರಕಟವಾಗಿವೆ. ಇವರು ಇನ್ಸ್‌ಪೆಕ್ಟರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ.

**ರು. ಶ್ರೀ ಬಾಲಕೃಷ್ಣಮೂರ್ತಿ :** ಉತ್ತಮವಾಗ್ಮಿ. ಯೋಗಾಸನ ತರಬೇತಿದಾರರು ಆದ ಇವರು ಸಾಂಸ್ಕೃತಿಕ–ಧಾರ್ಮಿಕರಂಗದಲ್ಲಿ ಉತ್ಸಾಹಿ ಕಾರ್ಯಕರ್ತರು. ಕಥೆ – ಕವನ ಬರೆಯುವ ಹವ್ಯಾಸವುಳ್ಳವರು ಮತ್ತು ಉತ್ತಮ ನಟರು. ಇವರು ಇನ್ಸ್‌ಪೆಕ್ಟರ್ ಆಗಿ ಕೆಲಸ ನಿರ್ವಹಿಸುತ್ತಿದಾರೆ.

**ಯಂ. ಗಣಪತಿ ಭಟ್ :** ಉತ್ತಮ ಕಥೆಗಾರರು ಪ್ರತಿಭಾನ್ವಿತ ರಂಗನಟರು. ವಸುಂಧರಾ ಕಥಾ ಸ್ಪರ್ಧೆಯಲ್ಲಿ ಸತತವಾಗಿ ಎರಡು ವರ್ಷ ಪ್ರಥಮ ಬಹುಮಾನಗಳಿಸಿದ್ದಾರೆ. ಹಲವಾರು ಕಥೆಗಳು ಪ್ರಕಟಿತವಾಗಿವೆ. ಮೆಶೀನ್ ಷಾಪ್‌ನಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಬಿ. ಎ. ಎಸ್. ಕೊಟ್ರೇಶಿ :** ಕವನಗಳ ರಚನೆ ಇವರ ಪ್ರಮುಖ ಹವ್ಯಾಸ. ಉತ್ತಮ ನಟರು, ಉತ್ಸಾಹಿ ಕಾರ್ಯಕರ್ತರು. ಕವಿ ಸಮ್ಮೇಳನಗಳಲ್ಲಿ ಭಾಗವಹಿಸಿದ್ದಾರೆ. ಇನ್ಸ್‌ಪೆಕ್ಟರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಎಸ್. ಜಿ. ಶಿವಶಂಕರ್ :** ಬಹುಮುಖ ಪ್ರತಿಭೆಯುಳ್ಳ ಇವರು ಉತ್ತಮ ನಾಟಕಕಾರರು. ನಾಟಕ ಅಧ್ಯಯನದಲ್ಲಿ ಡಿಪ್ಲೊಮ ಪಡೆದಿದ್ದಾರೆ. ಇವರ ಕವನ ಸಂಕಲನ ಕಾದಂಬರಿಗಳು ಮತ್ತು ಹಲವು ನಾಟಕಗಳು ಪ್ರಕಟವಾಗಿ ಜನಪ್ರಿಯವಾಗಿವೆ. ಇವರು ಆರ್ ಅಂಡ್ ಡಿ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ನರಹರಿ :** ಕಾವ್ಯರಚನೆ ಮೆಚ್ಚಿನ ಹವ್ಯಾಸ. ಸಾಹಿತ್ಯದ ಎಲ್ಲ ಪ್ರಾಕಾರದಲ್ಲೂ ಆಸಕ್ತಿ ಇರುವ ಇವರು ಡೆವಲಪ್‌ಮೆಂಟ್ ಇಂಜನೀಯರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಡಿ. ಸುಬ್ರಹ್ಮಣ್ಯ :** ವೃತ್ತಿ ರಂಗಭೂಮಿಯಲ್ಲಿ ತಮ್ಮ ಅಭಿನಯ ಶ್ರೀಮಂತಿಕೆಯಿಂದ ತಮ್ಮದೇ ಆದ ಸ್ಥಾನವನ್ನು ಕಲ್ಪಿಸಿಕೊಂಡಿದ್ದ ಇವರು ಹಲವಾರು ನಾಟಕಗಳನ್ನು ಮತ್ತು

ಕವನಗಳನ್ನು ರಚಿಸಿದ್ದಾರೆ. ಏಕಪಾತ್ರಾಭಿನಯ ರಚನೆಯನ್ನು ಮಾಡಿರುವ ಇವರಿಗೆ ಜ್ಯೋತಿಷ್ಯದಲ್ಲಿ ವಿಶೇಷ ಆಸಕ್ತಿ ಇದೆ. ಇವರು ಅಕೌಂಟ್ಸ್ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ವೈ. ಸತೀಶ ಕುಮಾರ್ :** ಉತ್ಸಾಹಿ ಬರಹಗಾರರು. ಕವನಗಳ ರಚನೆಯಲ್ಲಿ ವಿಶೇಷ ಆಸಕ್ತಿ. ಇವರ ಕೆಲವು ಕವನಗಳು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಇವರು ಮೆಶಿನ್ ಷಾಪ್‌ನಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಸಿದ್ದಲಿಂಗಪ್ಪ :** ಭಾರತೀಯ ರಕ್ಷಣಾದಳದ ಶಿಸ್ತಿನ ಸಿಪಾಯಿ ಆಗಿದ್ದವರು. ನಾಡು ನುಡಿಯ ಬಗ್ಗೆ ಅಪಾರ ಪ್ರೇಮ. ಉತ್ಸಾಹಿ ಕಾರ್ಯಕರ್ತರಾಗಿರುವ ಇವರು ವಾಚ್ ಅಂಡ್ ವಾರ್ಡ್ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಸುಡ್ God ಮಿತ್ರ :** ನಿಜ ನಾಮಧೇಯ ಸೂರ್ಯನಾರಾಯಣ ಚಡಗ. ಪ್ರತಿಭಾನ್ವಿತ ನಟ. ಉತ್ತಮ ವಾಕ್ಪಟು. ಸದಾ ಅಧ್ಯಯನ ಶೀಲ. ರಂಗ ಚಟುವಟಿಕೆಯಲ್ಲಿ ಉತ್ಸಾಹದಿಂದ ಕಾರ್ಯನಿರ್ವಹಿಸುವ ಇವರು ಹಲವಾರು ಕವನಗಳನ್ನು ರಚಿಸಿದ್ದಾರೆ. ಇವರು ಪ್ಲೇಟ್ ಷಾಪ್ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಹೊ. ಶೇ. ನಾಗರಾಜರಾವ್ :** ಹಾಸ್ಯ, ವಿಡಂಬನೆ, ಹರಟೆ, ಕಾವ್ಯ, ಕಥೆ ಬರೆಯಬಲ್ಲ ಸೃಜನಶೀಲ ಬರಹಗಾರರು. ಜ್ಯೋತಿಷ್ಯ ಮತ್ತು ಸಂಖ್ಯಾಶಾಸ್ತ್ರದಲ್ಲಿ ಅಧ್ಯಯನ ನಡೆಸಿದ್ದಾರೆ. ಉತ್ತಮ ನಟರೂ ಆದ ಇವರು ಇನ್ಸ್‌ಪೆಕ್ಟರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಯುಗಟಿ ಅನಂತು :** ನಿಜ ನಾಮಧೇಯ ಅನಂತಕೃಷ್ಣ. ಉತ್ತಮ ವಿಮರ್ಶಕರು ಮತ್ತು ಚಿಂತನಶೀಲರು. ಕಾವ್ಯರಚನೆಯಲ್ಲಿ ವಿಶೇಷ ಆಸಕ್ತಿ. ಇವರ ಕೆಲವು ಕವನಗಳು ಪ್ರಕಟಗೊಂಡಿವೆ ಇವರು ಮೆಶಿನ್‌ಶಾಪ್‌ನಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಎಂ. ಇರ್ಷಾದ್ :** ಪ್ರೌಢಶಾಲಾ ದಿವಸಗಳಲ್ಲಿಯೇ ಕನ್ನಡ ಮತ್ತು ಹಿಂದಿ ಭಾಷೆಗಳಲ್ಲಿ ಕಾವ್ಯಗಳನ್ನು ರಚಿಸಿದ್ದಾರೆ. ಪ್ರಸ್ತುತ ಕಾನೂನು ವಿದ್ಯಾಭ್ಯಾಸ ಮಾಡುತ್ತಿರುವ ಇವರು ಫಾರಿನ್ ಫೈನಾನ್ಸ್ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಎಸ್. ಪಿ. ಪಟೇಲ್ :** ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ವಿಶೇಷ ಆಸಕ್ತಿ. ರಾಜಯೋಗದ ಕುರಿತು ಚಿಂತನ ಅಧ್ಯಯನ ನಡೆಸಿದ್ದಾರೆ. ಉತ್ತಮ ನಟರು ಮತ್ತು ನಿರ್ದೇಶಕರೂ ಆಗಿರುವ ಇವರು ಮೆಶೀನ್ ಷಾಪ್ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ವಿ. ಶ್ರೀನಿವಾಸಮೂರ್ತಿ :** ಸಾಹಿತ್ಯದ ವಿವಿಧ ಪ್ರಾಕಾರಗಳನ್ನು ಬಲ್ಲ ಇವರಿಗೆ ಕಾವ್ಯ ರಚನೆ ಒಂದು ಹವ್ಯಾಸ. ಉತ್ತಮ ನಟರೂ ಆಗಿರುವ ಇವರು ಆರ್ ಅಂಡ್ ಡಿ ವಿಭಾಗದಲ್ಲಿ ಕೆಲಸ ನಿರ್ವಹಿಸುತ್ತಿದ್ದಾರೆ.

**ಎಚ್. ವೈ. ವಿಶಲ್ :** ಕನ್ನಡ ಮಿತ್ರರ ಸಕ್ರಿಯ ಕಾರ್ಯಕರ್ತರಾದ ರಂಗಸ್ವಾಮಿಶೆಟ್ಟರ ಸಹೋದರರು. ಕೆಜಿಎಫ್ ಪ್ರಥಮ ದರ್ಜೆ ಕಾಲೇಜಿನಲ್ಲಿ ವಿಜ್ಞಾನವನ್ನು ಅಭ್ಯಸಿಸುತ್ತಿರುವ ಪ್ರತಿಭಾನ್ವಿತ ವಿದ್ಯಾರ್ಥಿ. ಕಾವ್ಯರಚನೆ ಮತ್ತು ಕಥಾಕಾಲಕ್ಷೇಪ ಮಾಡುವುದರಲ್ಲಿ ವಿಶೇಷ ಆಸ್ಥೆಯಿದೆ.

ನಮ್ಮ ಜಾಹಿರಾತುದಾರರು

# OUR ADVERTISERS


| | | Page N |
|---|---|---|
| 1. | Karnataka Enterprises | |
| 2. | Veljan – Hydrair – Ltd., | |
| 3. | Jayshree Industrial Accessories | |
| 4. | KGF Builders Association | |
| 5. | Good Year India Ltd., | |
| 6. | Usha Telehoist Ltd., | |
| 7. | Steelcast Bhavnagar Private Ltd., | |
| 8. | Ghatge Patil Industries Ltd., | |
| 9. | Sonalakar Tool Works Pvt. Ltd., | |
| 10. | SIM – Maneklal Industries Ltd., | |
| 11. | Dunlop India Ltd., | |
| 12. | Brakes India Ltd.. | |
| 13. | Republic Forge Company Ltd., | |
| 14. | Widia (India) Ltd , | |
| 15. | The Indian Tool Manufacturers Ltd., | |
| 16. | M/s. Allied Elecricals | |
| 17. | M/s. Vijaya Automobiles | |
| 18. | M/s. WERKZEUGE (India) | |
| 19. | Brahans Rubber Products | |
| 20. | Sheth Fasteners | |
| 21. | Sri Ramanathar & Co., | |
| 22. | G. E. Spokes | |
| 23. | Hydromatik Belgaum Pvt. Ltd., | |
| 24. | Forging & Stamping Pvt. Ltd , | |
| 25. | Durano Process Pvt. Ltd., | |
| 26. | Sri Rajarajeswari Foundry | |
| 27. | John Fowler (India) Ltd., | |
| 28. | Kartik Steels Ltd., | |
| 29. | M/s. M. J. Enterprises | |
| 30. | Balaji Engineering Works | |
| 31. | KCL Cummins Ltd., | Cover Page |
| 32. | Bharath Earth Movers Ltd., | Cover Page |
| 33. | N. Rama Reddy & Co., | Cover Page |

ಶ್ರೀ ವೆಂಕಟೇಶ್ವರ ಕಲಾ ಮುದ್ರಕರು, ಕೋಲಾರ.